ನಿಮ್ಮ ಮನೆ-ಮನದ ಮಮತೆಯ

# ಅವಂತಿ




ಸಾಹಿತ್ಯ ಸಂಪದ

K.P.P. Regd. No. 303/2000
ಕಗ್ಗೆರೆ ಪ್ರಕಾಶನ, ಬೆಂಗಳೂರು

## ಅಭಿಪ್ರಾಯಗಳು

■ ನೀವು ಕಳಿಸಿದ ಅನಂತದ ಸಂಚಿಕೆಗಳು ತಲುಪಿವೆ. ನಿಮ್ಮ ಸಾಹಸಕ್ಕೆ ಅಭಿನಂದನೆಗಳು. ಪತ್ರಿಕೆ ಬೆಳೆದು ಇನ್ನಷ್ಟು ಅಭಿವೃದ್ಧಿ ಹೊಂದಲಿ ಎಂದು ಹೃತ್ಪೂರ್ವಕ ಹಾರೈಸುತ್ತೇನೆ. **–ರಾಮಚಂದ್ರ ದೇವ**

■ ಇಂತಹ ಪತ್ರಿಕೆ ಮಾಡಿಯೇ ಬದುಕುತ್ತೇನೆಂಬ ನಿಮ್ಮ ಛಲ ಮೆಚ್ಚುವಂತಾದ್ದೇ.

**–ಆರ್.ಜಿ. ಹಳ್ಳಿ ನಾಗರಾಜ್**

■ ನಿನ್ನ ಆಸೆಯ ಕೂಸು ಅನಂತನಿಗೆ ಈಗ ಆರು ತಿಂಗಳು ಅಲ್ವ? ಆ ೬ ನಿನ್ನ ಹುಟ್ಟು (೧–೬–೧೯೭೧) ಹಬ್ಬದ ತಿಂಗಳು. ನಿನ್ನ ಹುಟ್ಟುಹಬ್ಬಕ್ಕೆ ನನ್ನ ಹೃದಯದ ಪ್ರೀತಿಯ ಶುಭಾಶಯಗಳು. **–ಗೆಳತಿ**

■ ಪ್ರಿಯ ಪ್ರಕಾಶ್, ಅನಂತ –೭ ತಲುಪಿದೆ. ವೈವಿಧ್ಯಮಯವಾಗಿದೆ.

**–ಪ್ರೊ. ಚಂಪಾ**

■ ನಿಮ್ಮ ಆಯ್ಕೆಯ ವಿಷಯಗಳು ತುಂಬಾ ವೈಚಾರಿಕವಾಗಿವೆ. ಒಂದು ದೊಡ್ಡ ಪತ್ರಿಕೆ ಮಾಡದಷ್ಟು ಕೆಲಸವನ್ನು ನೀವು ಕೇವಲ ೩೨ ಪುಟಗಳಲ್ಲಿ ಮಾಡಿದ್ದೀರಿ.

**–ಪ್ರೊ. ದೊಡ್ಡರಂಗೇಗೌಡ**

■ ನಿಮ್ಮ ಹಠ ದೊಡ್ಡದು. ಆದರೆ ವಿವೇಕಯುತವಾದ ಮಾರ್ಗದಿಂದ ಯುದ್ಧ ಮಾಡಿರಿ. ಹಠ ಮತ್ತು ಆವೇಶಗಳು ನಮ್ಮ ದಾರಿ ತಪ್ಪಿಸುವ ಸಂಭವವಿದೆ. ಆದರೂ ನಿಮ್ಮ ಈ ಛಲದ ಸ್ವಭಾವದಿಂದಾಗಿಯೇ ನನಗೆ ಪ್ರಿಯರು. ನಿಮ್ಮ ಸಾಹಸ ಫಲಪ್ರದವಾಗಲಿ. **–ಪ್ರೊ. ಶಿವರಾಮು ಕಾಡನಕುಪ್ಪೆ**


| | | |
|---|---|---|
| ಮುಖಪುಟ ಕಲೆ | : | ಪುಂಡಲೀಕ |
| ಒಳಪುಟ ಕಲೆ | : | ಸುಧಾಕರ ದರ್ಬೆ, ಸೋಮ ವರದ, ಸೂರ್ಯ |
| ಅಕ್ಷರ ಜೋಡಣೆ–ಪುಟ ವಿನ್ಯಾಸ | : | ಮಂಜು ಇಮೇಜ್ ಡಿಸೈನಿಂಗ್ ಸೆಂಟರ್ ಫೋನ್ : ೩೪೦೮೧೮೧ |
| ಮುದ್ರಕರು | : | ಚಂದ್ರಿಕಾ ಪ್ರಿಂಟರ್ಸ್, ಶಿವನಗರ, ಬೆಂ.–೧೦. |

## ನಿಮ್ಮೊಡನೆ

'ಅನಂತ' ನಮ್ಮ ನಿಮ್ಮ ಪ್ರತಿಭೆಗಳ ವಿಕಾಸಕ್ಕಾಗಿ ಕಳೆದ ಆರು ತಿಂಗಳಿಂದ ಮರು ಹುಟ್ಟಿ ನಿರಂತರವಾಗಿ ಪ್ರಕಟವಾಗುತ್ತಿದೆ. ಕನ್ನಡದ ಮಟ್ಟಿಗೆ ಹೇಳುವುದಾದರೆ ಇಂತಹ ಒಂದು ಸಾಹಿತ್ಯ ಪತ್ರಿಕೆಯನ್ನು ನಡೆಸಿಕೊಂಡು ಒಬ್ಬ ಸಂಪಾದಕ ಜೀವನ ನಿರ್ವಹಣೆ ಮಾಡುವುದು ಅಸಾಧ್ಯದ ಮಾತು. ಆದರೆ ನನ್ನದೇ ಆದ ಕೆಲವು ಯೋಜನೆಗಳು ಕಳೆದ ಒಂದು ವರ್ಷದಿಂದ ನಿರುದ್ಯೋಗಿಯಾಗಿದ್ದ ನನಗೆ ಈ ಆರು ತಿಂಗಳೂ ಅನ್ನ ಕೊಟ್ಟಿವೆ ಎಂದು ಎದೆ ತಟ್ಟಿ ಹೇಳುತ್ತೇನೆ. ಅಂದರೆ ಒಂದು ಸಾಹಿತ್ಯ ಪತ್ರಿಕೆ ಮಾಡಿಕೊಂಡೂ ಬದುಕಲಿಕ್ಕೆ ಸಾಧ್ಯತೆಗಳಿವೆ ಎಂಬ ಸತ್ಯ ದರ್ಶನವಾಗಿದೆ. ಇದು ಸುಲಭದ ಕೆಲಸವೂ ಅಲ್ಲ, ಕತ್ತಿಯ ಮೇಲೆ ನಡೆದಷ್ಟೇ ಕಠಿಣ. ಇವತ್ತು ಕನ್ನಡದ ಬರಹಗಾರರು ಹೇರಳವಾಗಿದ್ದಾರೆ. ಹೊಸಬರಂತೂ ಯಾರಿಗೂ ಲೆಕ್ಕಕ್ಕೆ ಇಲ್ಲ. ಇವರನ್ನೆಲ್ಲಾ ಒಂದು ವೇದಿಕೆಗೆ ತಂದು ಅವರ ಪ್ರತಿಭೆಗಳಿಗೆ ಅವಕಾಶ ಕಲ್ಪಿಸುವುದೇ ಅನಂತದ ಮುಖ್ಯ ಉದ್ದೇಶ. ಅನಂತ ನಮ್ಮೆಲ್ಲರಿಗೂ ಒಂದು ಸಾಂಸ್ಕೃತಿಕ ವೇದಿಕೆ. ಕಲೆ, ಸಾಹಿತ್ಯ, ಸಂಗೀತ, ಸಂಸ್ಕೃತಿ, ಸಾಮಾಜಿಕ, ಸಿನಿಮಾ, ರಂಗಭೂಮಿ- ಇತ್ಯಾದಿ ಕ್ಷೇತ್ರಗಳಲ್ಲಿ ದುಡಿಯುತ್ತಿರುವ ಹಾಗೂ ಆಸಕ್ತರಾದ ನೀವು ಮತ್ತು ನಿಮ್ಮ ಗೆಳೆಯರು ಇದನ್ನು ಉಳಿಸಿ ಬೆಳೆಸಿ ಜೊತೆಗೆ ನೀವೂ ಬೆಳೆಯಿರಿ. ಇದು ನಿಮ್ಮ ಪತ್ರಿಕೆ. ಅಂಬೆಗಾಲಿಡುತ್ತಿರುವ ಅನಂತನಿಗೆ ನೀವು ಕೈಹಿಡಿದರೆ ದಿಟ್ಟ ಹೆಜ್ಜೆ ಹಾಕುತ್ತಾನೆ. ಎಂದಿನಂತೆ ನಿಮ್ಮ ಮುಕ್ತಮನಸ್ಸಿನ ಅಭಿಪ್ರಾಯಗಳಿಗೆ ಸ್ವಾಗತ.

ಜೂನ್-೨೦೦೩
ಬೆಂಗಳೂರು.

**-ಕಗ್ಗೆರೆ ಪ್ರಕಾಶ್**
ಸಂಪಾದಕ. 

---

### ಈ ಸಂಚಿಕೆಯಲ್ಲಿ.....

* ಕುವೆಂಪು ವಿಶ್ವಮಾನವ ಸಂದೇಶ
* ಸಮ್ಮೇಳನಾಧ್ಯಕ್ಷರಿಗೆ ದೊಡ್ಡ ಮೊತ್ತದ ಗೌರವ ಧನ ನಿಲ್ಲಿಸಬೇಕು
  **-ಡಾ|| ಜಿ.ಎಸ್.ಶಿವರುದ್ರಪ್ಪ**
* ಬೆಳಗಾವಿ ಸಾಹಿತ್ಯ ಸಮ್ಮೇಳನ : ಒಂದು ಇಣುಕು ನೋಟ
  **-ಖುರ್ಷಿದ್ ಆಲಂ ಮೋಮಿನ**
* ನವಲಗುಂದದ ಅತ್ತಿಮಬ್ಬೆ ಮಂಜುಳ ಬೆಂಡಿಗೇರಿ
  **-ಎಸ್.ಎಚ್. ಲಂಬೂನವರ**
* ಪೈಲೆಟ್ ಹೆಂಡತಿ ಈಗ ಭಿಕ್ಷುಕಿ!
  **-ಕೆ. ಶಾಂತಕುಮಾರಿ**
* ಬಹುಮುಖ ಪ್ರತಿಭಾವಂತೆ ಕಮಲಾಜೈನ್
  **-ಬಿ. ಬಸವರಾಜು**
* ಮನುಷ್ಯ... ಬೆತ್ತಲು... ಮಾನವ!
  **-ಜೆ.ಎನ್.ಕೃಷ್ಣಶರ್ಮ**
* ಹಿರಿಯ-ಕಿರಿಯ ಕವಿಗಳ ಕಾವ್ಯಧಾರೆ
* ಬುದ್ಧ ನನ್ನೊಳಗೆ ಏನೆಲ್ಲಾ ಮಾಡಿಬಿಟ್ಟ!

ಇನ್ನೂ ಹಲವು ವೈಶಿಷ್ಟ್ಯತೆಗಳ ರಸದೌತಣ



**ವಿಶ್ವಮಾನವ ಗೀತೆ–ಅನಿಕೇತನ**

ಓ ನನ್ನ ಚೇತನ
ಆಗು ನೀ ಅನಿಕೇತ !

ರೂಪರೂಪಗಳನು ದಾಟಿ
ನಾಮಕೋಟಿಗಳನು ಮೀಟಿ
ಎದೆಯ ಬಿರಿಯೆ ಭಾವದೀಟಿ
ಓ ನನ್ನ ಚೇತನ
ಆಗು ನೀ ಅನಿಕೇತನ!

ನೂರು ಮತದ ಹೊಟ್ಟ ತೂರಿ
ಎಲ್ಲತತ್ತ್ವದೆಲ್ಲೆ ಮೀರಿ
ನಿರ್ದಿಗಂತವಾಗಿ ಏರಿ
ಓ ನನ್ನ ಚೇತನ
ಆಗು ನೀ ಅನಿಕೇತನ !

ಎಲ್ಲಿಯೂ ನಿಲ್ಲದಿರು
ಮನೆಯನೆಂದು ಕಟ್ಟದಿರು
ಕೊನೆಯನೆಂದು ಮುಟ್ಟದಿರು
ಓ ಅನಂತವಾಗಿರು
ಓ ನನ್ನ ಚೇತನ
ಆಗು ನೀ ಅನಿಕೇತನ !

ಅನಂತ ತಾನ್ ಅನಂತವಾಗಿ
ಆಗುತಿಹನೆ ನಿತ್ಯಯೋಗಿ
ಅನಂತ ನೀ ಅನಂತವಾಗು
ಆಗು ಆಗು ಆಗು ಆಗು
ಓ ನನ್ನ ಚೇತನ
ಆಗು ನೀ ಅನಿಕೇತನ!

–ಕುವೆಂಪು

# ಕುವೆಂಪು ವಿಶ್ವಮಾನವ ಸಂದೇ[ಶ]

ಪ್ರತಿಯೊಂದು ಮಗುವೂ ಹುಟ್ಟುತ್ತಲೇ ವಿಶ್ವಮಾನವ. ಬೆಳೆಯುತ್ತಾ ನಾವು ಅದನ್ನು ಅಲ್ಪಮಾನವನನ್ನಾಗಿ ಮಾಡುತ್ತೇವೆ. ಮತ್ತೆ ಅದನ್ನು ವಿಶ್ವಮಾನವನನ್ನಾಗಿ ಮಾಡುವುದೇ ವಿದ್ಯೆಯ ಕರ್ತವ್ಯವಾಗಬೇಕು. ಹುಟ್ಟುವಾಗ ವಿಶ್ವಮಾನವನಾಗಿಯೇ ಹುಟ್ಟಿದ ಮಗುವನ್ನು ನಾವು ದೇಶ, ಭಾಷೆ, ಮತ, ಜಾತಿ, ಜನಾಂಗ, ವರ್ಣ ಇತ್ಯಾದಿ ಉಪಾಧಿಗಳಿಂದ ಬದ್ಧನನ್ನಾಗಿ ಮಾಡುತ್ತೇವೆ. ಅವೆಲ್ಲವುಗಳಿಂದ ಪಾರಾಗಿ ಅವನನ್ನು ಬುದ್ಧನನ್ನಾಗಿ ಅಂದರೆ ವಿಶ್ವಮಾನವನನ್ನಾಗಿ ಪರಿವರ್ತಿಸುವುದೇ ನಮ್ಮ ವಿದ್ಯೆ, ಸಂಸ್ಕೃತಿ, ನಾಗರೀಕತೆ, ಎಲ್ಲದರ ಆದ್ಯ ಕರ್ತವ್ಯವಾಗಬೇಕು. ಪ್ರಪಂಚದ ಮಕ್ಕಳೆಲ್ಲಾ ಅನಿಕೇತನರಾಗಬೇಕು. ಲೋಕ ಉಳಿದು ಬಾಳಿ ಬದುಕಬೇಕಾದರೆ.

ಮಾನವ ವಿಕಾಸದ ಹಾದಿಯಲ್ಲಿ ಆಯಾ ಕಾಲದ ಅಗತ್ಯಗಳನ್ನು ಪೂರೈಸಲು ಮಹಾ ಪುರುಷರು ಸಂಭವಿಸಿ ಹೋಗಿದ್ದಾರೆ. ಅವರಲ್ಲಿ ಕೆಲವರ ವಾಣಿ ವಿಶಿಷ್ಟ ಧರ್ಮವಾಗಿ ರೂಪುಗೊಂಡು ಕಡೆಗೆ ಮತವಾಗಿ ಪರಿಮಿತವಾಯಿತು. ಮಾನವರನ್ನು ಕೂಡಿಸಿ ಬಾಳಿಸಬೇಕೆಂಬ ಸದುದ್ದೇಶದಿಂದ ಹುಟ್ಟಿಕೊಂಡ ಮಹಾತ್ಮರ ವಾಣಿ ಮತವಾಗಿ ಮಾರಕವಾಯಿತು. ಒಂದು ಯುಗಕ್ಕೆ ಅಗತ್ಯವೆನಿಸಿದ ಧರ್ಮ ಕಾಲಾನುಕಾಲಕ್ಕೆ ಮತವಾಗಿ ನಿರುಪಯುಕ್ತವೆನಿಸಿ ಮತ್ತೊಂದು ಹೊಸ ಧರ್ಮಕ್ಕೆ ಎಡೆಗೊಟ್ಟದ್ದೂ ಉಂಟು. ಹೀಗಾಗಿ ಅನೇಕ ಧರ್ಮಗಳು ಮತಗಳಾಗಿ ಜನತೆಯನ್ನು ಗುಂಪುಗುಂಪಾಗಿ ಒಡೆದಿವೆ,

ಯುದ್ಧಗಳನ್ನು ಹೊತ್ತಿಸಿವೆ. ಜಗತ್ತಿನ ಶೋಭೆಗಳಿಗೆಲ್ಲಾ ಮೂಲಕಾರಣವೆಂಬಂತೆ! ವಿಜ್ಞಾನ ಯುಗದ ಪ್ರಾಯೋಗಿಕ ದೃಷ್ಟಿಗೆ ಇನ್ನುಮೇಲೆ ಮತ ಮೌಢ್ಯ ಒಪ್ಪಿಗೆಯಾಗದು. ವಿನೋಬಾ ಭಾವೆಯವರು ಹಿಂದೆ ಒಮ್ಮೆ ಹೇಳಿದಂತೆ ಮತ ಮತ್ತು ರಾಜಕೀಯದ ಕಾಲ ಆಗಿ ಹೋಯಿತು. ಇನ್ನೇನಿದ್ದರೂ ಆಧ್ಯಾತ್ಮ ಮತ್ತು ವಿಜ್ಞಾನದ ಕಾಲ ಬರಬೇಕಾಗಿದೆ. ಮನುಜ ಮತ, ವಿಶ್ವಪಥ, ಸರ್ವೋದಯ, ಸಮನ್ವಯ, ಪೂರ್ಣದೃಷ್ಟಿ–ಈ ಪಂಚಮಂತ್ರ ಇನ್ನೂ ಮುಂದಿನ ದೃಷ್ಟಿಯಾಗಬೇಕಾಗಿದೆ. ಅಂದರೆ ನಮಗೆ ಇನ್ನು ಬೇಕಾದುದು ಆ ಮತ ಈ ಮತ ಅಲ್ಲ; ಮನುಜ ಮತ. ಆ ಪಥ ಈ ಪಥ ಅಲ್ಲ ; ವಿಶ್ವ ಪಥ. ಆ ಒಬ್ಬರ ಈ ಒಬ್ಬರ ಉದಯ ಮಾತ್ರವಲ್ಲ ; ಸರ್ವರ ಸರ್ವಸ್ತರದ ಉದಯ. ಪರಸ್ಪರ ವಿಮುಖವಾಗಿ ಸಿಡಿದು ಹೋಗುವುದಲ್ಲ, ಸಮನ್ವಯಗೊಳ್ಳುವುದು. ಮಿತ ಮತದ ಅಂಶಿಕ ದೃಷ್ಟಿಯಲ್ಲ, ಭೌತಿಕ ಪಾರಮಾರ್ಥಿಕ ಎಂಬ ಭಿನ್ನ ದೃಷ್ಟಿಯಲ್ಲ, ಎಲ್ಲವನ್ನೂ ಭಗವದ್ ದೃಷ್ಟಿಯಿಂದ ಕಾಣುವ ಪೂರ್ಣದೃಷ್ಟಿ.

ಯಾವ ಭಾವನೆಗಳು ಜಗತ್ತಿನಲ್ಲಿ ಎಲ್ಲ ಮಾನವರಿಗೂ ಅನ್ವಯವಾಗಬಹುದೊ ಅಂತಹ ಭಾವನೆ ಅಂತಹ ದೃಷ್ಟಿ ಬರಿಯ ಯಾವುದೋ ಒಂದು ಜಾತಿಗೆ, ಮತಕ್ಕೆ, ಗುಂಪಿಗೆ, ಒಂದು ದೇಶಕ್ಕೆ ಮಾತ್ರ ಅನ್ವಯವಾಗುವುದಿಲ್ಲ. ಸರ್ವಕಾಲಕ್ಕೂ ಅನ್ವಯವಾಗುವ ಇವು ಮೂಲಮೌಲ್ಯಗಳು. ಈ ಮೌಲ್ಯಗಳು ಮಾನವರನ್ನು ಕೂಡಿಸಿ ಬಾಳಿಸುವತ್ತ ನಡೆದಾವು. ಗುಂಪುಗಾರಿಕೆಗೆಂದು ಇವು ತೊಡಗುವುದಿಲ್ಲ, ಅದೇನಿದ್ದರೂ ರಾಜಕೀಯದ ಕರ್ಮ. ವ್ಯಕ್ತಿ ಸ್ವಾತಂತ್ರ್ಯವನ್ನು ನೀಡಿಯೂ ಸಮಷ್ಟಿಯ ಉದ್ಧಾರದ ದೃಷ್ಟಿ ಇದರದು, ಈ ದೃಷ್ಟಿಗೆ ವ್ಯಕ್ತಿಗಳೆಷ್ಟೊ ಅಷ್ಟೂ ಸಂಖ್ಯೆಯ ಮತಗಳಿರುವುದು ಸಾಧ್ಯ ; ಅಷ್ಟೂ ವ್ಯಕ್ತಿಗಳು ಸಮಷ್ಟಿಯ ವಿಕಾಸಕ್ಕೆ ಸಾಧಕವಾಗುವುದು ಸಾಧ್ಯ. ಈ ದರ್ಶನವನ್ನೇ ವಿಶ್ವಮಾನವ ಗೀತೆ ಸಾರುತ್ತದೆ.

## ——— ವಿಶ್ವ ಮಾನವತೆಗೆ ಸಪ್ತ ಸೂತ್ರಗಳು ———

೧. ಮನುಷ್ಯ ಜಾತಿ ತಾನೊಂದೇ ವಲಂ ಎಂಬುದನ್ನು ನಿರುಪಾಧಿಕವಾಗಿ ಸ್ವೀಕರಿಸಬೇಕು.

೨. ವರ್ಣಾಶ್ರಮವನ್ನು ತಿದ್ದುವುದಲ್ಲ, ಅದನ್ನು ಸಂಪೂರ್ಣವಾಗಿ ತೊಲಗಿಸಬೇಕು. ಅಂದರೆ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಶೂದ್ರ, ಅಂತ್ಯಜ, ಷಿಯಾ, ಸುನ್ನಿ, ಪಾಟಿಸ್ಟೆಂಟ್, ಕ್ಯಾಥೊಲಿಕ್, ಸಿಖ್ ನಿರಂಕಾರಿ ಇತ್ಯಾದಿ ವಿಭಜನೆಯನ್ನು ನಿರ್ನಾಮ ಮಾಡಬೇಕು.

೩. ಜಾತಿ ಪದ್ಧತಿಯನ್ನು ಸಂಪೂರ್ಣವಾಗಿ ನಿರಾಕರಿಸಿ ವಿನಾಶಗೊಳಿಸಬೇಕು.

೪. ಮತ ತೊಲಗಿ ಆಧ್ಯಾತ್ಮ ಮಾತ್ರ ವೈಜ್ಞಾನಿಕ ತತ್ವವಾಗಿ ಮಾನ್ಯತೆ ಪಡೆಯಬೇಕು.

೫. ಮತ ಮನುಜಮತವಾಗಬೇಕು, ಪಥ ವಿಶ್ವಪಥವಾಗಬೇಕು, ಮನುಷ್ಯ ವಿಶ್ವಮಾನವನಾಗಬೇಕು.

೬. ಮತ ಗುಂಪುಕಟ್ಟುವ ವಿಷಯವಾಗಬಾರದು. ಯಾರೂ ಯಾವ ಒಂದು ಮತಕ್ಕೂ ಸೇರದೆ, ಪ್ರತಿಯೊಬ್ಬನೂ ತಾನು ಕಂಡುಕೊಳ್ಳುವ ತನ್ನ ಮತಕ್ಕೆ ಮಾತ್ರ ಸೇರಬೇಕು. ಅಂದರೆ ಜಗತ್ತಿನಲ್ಲಿ ಎಷ್ಟು ವ್ಯಕ್ತಿಗಳಿದ್ದಾರೋ ಅಷ್ಟೇ ಸಂಖ್ಯೆಯ ಮತಗಳಿರುವಂತಾಗುತ್ತದೆ. ಯಾರೊಬ್ಬರೂ ಇನ್ನೊಬ್ಬರ ಮತಕ್ಕೆ ಸೇರಿ ಗುಂಪು ಕಟ್ಟಿ ಜಗಳ ಹಚ್ಚುವಂತಾಗಬಾರದು.

೭. ಯಾವ ಒಂದು ಗ್ರಂಥವೂ ಏಕೈಕ ಪರಮಪೂಜ್ಯ ಧರ್ಮ ಗ್ರಂಥವಾಗಬಾರದು. ಪ್ರತಿಯೊಬ್ಬ ವ್ಯಕ್ತಿಯೂ ತನಗೆ ಸಾಧ್ಯವಾದವುಗಳೆನ್ನೆಲ್ಲ ಓದಿ ತಿಳಿದು ತನ್ನ ದರ್ಶನವನ್ನು ತಾನೇ ನಿರ್ಣಯಿಸಿ ಕಟ್ಟಿಕೊಳ್ಳಬೇಕು.

–ಸಂಗ್ರಹ : ಕೆಸಿಪಿ

## ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ ಪ್ರಶ್ನೋತ್ತರ ಮಾಲಿಕೆ-೨

ಅರವತ್ತು ವರ್ಷಗಳ ಪ್ರಕಟಣಾ ದಾಖಲೆ ಸ್ಥಾಪಿಸಿದ್ದ ಪ್ರಜಾಮತ ವಾರಪತ್ರಿಕೆ ಪಾಕ್ಷಿಕವಾ ಒಂದೆರಡು ವರ್ಷಗಳ ಹಿಂದೆ ಪುನರಾರಂಭಗೊಂಡಿತ್ತು. ಅದಕ್ಕಾಗಿ ಅಖಿಲ ಭಾರತ ಕನ್ನಡ ಸಾಹಿತ್ ಸಮ್ಮೇಳನ ಕುರಿತಂತೆ ಪ್ರಶ್ನೋತ್ತರ ಮಾಲಿಕೆ ಶುರು ಮಾಡಿದ್ದೆ. ಡಾ|| ಎಸ್.ಕೆ. ಕರೀಂಖಾನ್ ಡಾ|| ಎಂ.ಚಿದಾನಂದಮೂರ್ತಿ, ಡಾ|| ಸಿದ್ಧಲಿಂಗಯ್ಯ, ಡಾ|| ಜಿ.ಎಸ್. ಶಿವರುದ್ರಪ್ಪ ಡಾ|| ಕಮಲಾ ಹಂಪನಾ, ಡಾ|| ಎಚ್.ಎಸ್. ಪಾರ್ವತಿ, ಪ್ರೊ. ಎಲ್.ಎಸ್. ಶೇಷಗಿರಿರಾವ್ ಪ್ರೊ. ಚಂದ್ರಶೇಖರ ಪಾಟೀಲ, ಜಿ.ನಾರಾಯಣ, ನೇಮಿಚಂದ್ರ, ಹರಿಕೃಷ್ಣ ಪುನರೂರು, ಟಿ. ಬಿ ಜಯಚಂದ್ರ (ಕೃಷಿ ಸಚಿವರಾಗಿದ್ದರು)-ಇಂತಹ ಗಣ್ಯರನ್ನೆಲ್ಲಾ ಸಂಪರ್ಕಿಸಿದ್ದೆ. ಆದರೆ ಈ ಮಾಲಿಕ ಒಂದೆರಡು ಸಂಚಿಕೆಗೆ ನಿಂತು ಹೋಯಿತು. ಇವರೆಲ್ಲರ ವಿಚಾರಧಾರೆಯನ್ನು ಈಗ ಕಂತಿನ ಪ್ರಕಾ ಇಲ್ಲಿ ಪ್ರಸ್ತುತಪಡಿಸುತ್ತಿರುವೆ.

-ಸಂಪಾದಕ.

### ಪ್ರಶ್ನೆಗಳು

೧ ಇದುವರೆಗೂ ಇಬ್ಬರು ಮಹಿಳೆಯರು ಮಾತ್ರ ಸಾಹಿತ್ಯ ಸಮ್ಮೇಳನಾಧ್ಯಕ್ಷರಾಗಿದ್ದಾರೆ (ಜಯದೇವಿ ತಾಯಿ ಲಿಗಾಡೆ-ಮಂಡ್ಯ ೧೯೭೪, ಶಾಂತಾದೇವಿ ಮಾಳವಾಡ-ಬಾಗಲಕೋಟೆ ೨೦೦೦) ಈಗ ಇನ್ನೂ ಹಲವು ವರ್ಷಗಳ ಕಾಲ ಮಹಿಳೆಯರೇ ಅಧ್ಯಕ್ಷರಾಗಬೇಕು ಎಂಬ ಕೂಗಿದೆ. ಈ ಬಗ್ಗೆ ನಿಮ್ಮ ಅಭಿಪ್ರಾಯ ಏನು?

೨ ಈತನಕದ ಸಾಹಿತ್ಯ ಸಮ್ಮೇಳನದಲ್ಲಿ ಒಬ್ಬ ದಲಿತ ಅಥವಾ ಹಿಂದುಳಿದ ವರ್ಗಕ್ಕೆ ಸೇರಿದ ಸಾಹಿತಿ ಸಮ್ಮೇಳನಾಧ್ಯಕ್ಷ ಆಗಿದ್ದಿಲ್ಲ. ಇದಕ್ಕೆ ಕಾರಣ ಏನಿರಬಹುದು?

೩ ಪ್ರತಿ ವರ್ಷ ಸಾಹಿತ್ಯ ಸಮ್ಮೇಳನ ನಡೆಸುವ ಬದಲು ಮೂರು ವರ್ಷಕ್ಕೊಮ್ಮೆ ನಡೆಸಿದರ ಒಳ್ಳೆಯದು ಎನ್ನಲಾಗುತ್ತಿದೆ. ಇದಕ್ಕೆ ನೀವೇನು ಹೇಳುತ್ತೀರಿ?

೪ ಇದುವರೆಗೂ ನಡೆಸಿರುವ ಸಾಹಿತ್ಯ ಸಮ್ಮೇಳನದಲ್ಲಿ ಹೊಸ ಪ್ರತಿಭೆಗಳನ್ನು ಬೆಳಕಿ ತರಲು ಸಾಧ್ಯವಾಗಿದೆಯೆ?

೫ ಸಾಹಿತ್ಯ ಸಮ್ಮೇಳನಗಳಿಗೆ ರಾಜಕಾರಣಿಗಳ ಪ್ರವೇಶ ಎಷ್ಟು ಸರಿ?

೬. ನಿಮ್ಮ ದೃಷ್ಟಿಯಲ್ಲಿ ಸಾಹಿತ್ಯ ಸಮ್ಮೇಳನ ಹೇಗಿರಬೇಕು?

೭ ಇಂತಹ ಸಮ್ಮೇಳನಗಳಿಂದ ಏನಾದರೂ ಮಹತ್ತರವಾದದ್ದನ್ನು ನಿರೀಕ್ಷಿಸೋದ ಸಾಧ್ಯವೇ?



## ಸಮ್ಮೇಳನಾಧ್ಯಕ್ಷರಿಗೆ ದೊಡ್ಡ ಮೊತ್ತದ ಗೌರವ ಧನ ನಿಲ್ಲಿಸಬೇಕು

–ಡಾ।। ಜಿ. ಎಸ್. ಶಿವರುದ್ರಪ್ಪ

ಪ್ರತಿ ವರ್ಷದಂತೆ ಕನ್ನಡ ಸಾಹಿತ್ಯ ಪರಿಷತ್ತು ಏರ್ಪಡಿಸುವ 'ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನ', ಪರಿಷತ್ತಿನ ಪ್ರತಿಷ್ಠಿತ ಸಮಾರಂಭಗಳಲ್ಲಿ ಒಂದು. ಈ ಸಂದರ್ಭದಲ್ಲಿ ಮತ್ತೆ ಮತ್ತೆ ಈ ಸಮ್ಮೇಳನಗಳ ಪ್ರಸ್ತುತತೆಯನ್ನು ಕುರಿತು, ಇವುಗಳನ್ನು ಇನ್ನಷ್ಟು ಅರ್ಥಪೂರ್ಣವಾಗಿ ವ್ಯವಸ್ಥೆಗೊಳಿಸುವುದು ಹೇಗೆ ಎಂಬುದನ್ನು ಕುರಿತು ಪ್ರಶ್ನೆಗಳು ಪ್ರತಿಕ್ರಿಯೆಗಳು ಪತ್ರಿಕೆಯ ಪುಟಗಳಲ್ಲಿ ಕಾಣಿಸಿಕೊಳ್ಳುತ್ತವೆ.

ವಾಸ್ತವವಾಗಿ ಈ ಸಾಹಿತ್ಯ ಸಮ್ಮೇಳನ ಒಂದು ಉತ್ಸವದ ಸಂದರ್ಭ ಮಾತ್ರವಲ್ಲ, ಸಾಹಿತ್ಯಾಸಕ್ತರ ಹಾಗೂ ಸಾಹಿತಿಗಳ ಸಮ್ಮಿಲನದ ಸಂದರ್ಭವೂ ಹೌದು. ಹಾಗೆಯೆ ಸಾಹಿತ್ಯ ಮತ್ತು ಸಂಸ್ಕೃತಿಗೆ ಗಣನೀಯವಾದ ಕೊಡುಗೆಗಳನ್ನು ಕೊಟ್ಟ ಹಿರಿಯ ಸಾಹಿತಿಯೊಬ್ಬರನ್ನು ಈ ಸಮ್ಮೇಳನದ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸುವುದು ಒಂದು ಒಳ್ಳೆಯ ಪರಂಪರೆಯ ಸಂಕೇತವು ಹೌದು. ಈ ಅಧ್ಯಕ್ಷರನ್ನು ಪರಿಷತ್ತಿನ ಕಾರ್ಯಕಾರಿ ಸಮಿತಿ ಆಯ್ಕೆ ಮಾಡುವ ಹಿನ್ನೆಲೆಯಲ್ಲಿ ಅನೇಕ ಬಗೆಯ ಪರಿಗಣನೆಗಳು ಸಾಕಷ್ಟು ಕೋಲಾಹಲವು ಇರುತ್ತದೆ ಎನ್ನುವುದು ಅಪರಿಚಿತವಾದ ಸಂಗತಿ ಏನಲ್ಲ. ಕಾರ್ಯಕಾರಿ ಸಮಿತಿ ಅನೇಕ ಪ್ರಶ್ನೆಗಳನ್ನು, ಸವಾಲುಗಳನ್ನು, ಧರ್ಮ ಸಂಕಟಗಳನ್ನು ಎದುರಿಸಬೇಕಾಗುತ್ತದೆಂಬುದು ನಿಜವಾದರೂ ಅದರ ಆಯ್ಕೆ ಸಮರ್ಥನೀಯವಾಗುವುದು, ಅದು ನಿಜವಾಗಿಯೂ ಸಾಹಿತ್ಯ–ಸಂಸ್ಕೃತಿಗಳಿಗೆ ಮೌಲಿಕವಾದ ಕೊಡುಗೆಯನ್ನು ಸಲ್ಲಿಸಿರುವ ನಿಜವಾದ ಸಾಹಿತಿಯನ್ನು ಆಯ್ಕೆ ಮಾಡಿದೆಯೆ, ಇಲ್ಲವೇ–ಎಂಬ ಅಂಶದ ಮೇಲೆ ನಿಂತಿದೆಯೇ ಹೊರತು, ಹಾಗೆ ಆಯ್ಕೆಯಾದ ವ್ಯಕ್ತಿ ಮಹಿಳೆಯೋ, ಹಿಂದುಳಿದವನೊ, ದಲಿತನೊ ಎನ್ನುವ ಮೂಲಮಾನದ ಮೇಲೆ ಅಲ್ಲ. ಈ ವಿಷಯವನ್ನು ಗಂಭೀರವಾಗಿ ಪರಿಗಣಿಸುವುದಾದರೆ, ಈವರೆಗೆ ಇಬ್ಬರು ಮಹಿಳೆಯರಷ್ಟೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದದ್ದು ಯಾಕೆ? ಯಾವ ಹಿಂದುಳಿದ ವರ್ಗದವರಾಗಲಿ, ದಲಿತರಾಗಲೀ ಯಾಕೆ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಲಿಲ್ಲ ಎಂಬ ಪ್ರಶ್ನೆಗಳು ತಮಗೆ ತಾವೇ ಅಪ್ರಸ್ತುತವಾಗುತ್ತವೆ. ಹಾಗೆ ನೋಡಿದರೆ ಇನ್ನೂ ಇಂತಹ ಹತ್ತು ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷತೆಯ ಗೌರವಕ್ಕೆ ಅರ್ಹರಾದ ಶ್ರೇಷ್ಠ ಸೃಜನಶೀಲ ಬರಹಗಾರರು, ಘನ ವಿದ್ವಾಂಸರು, ಸಂಶೋಧಕರು, ವಿಮರ್ಶಕರು ಪ್ರಸ್ತುತ ಕನ್ನಡ ಸಾಹಿತ್ಯ ಸಂದರ್ಭದಲ್ಲಿ ಇದ್ದಾರೆ ಎಂಬುದನ್ನು ಮರೆಯಬಾರದು.

ಸಾಹಿತ್ಯ ಸಮ್ಮೇಳನದ ವೇದಿಕೆಯ ಮೇಲೆ (ಮುಖ್ಯವಾಗಿ ಸಾಹಿತ್ಯ ಸಮ್ಮೇಳನದ ಉದ್ಘಾಟನೆಯ ಹಾಗೂ ಸಮಾರೋಪ ಸಂದರ್ಭದಲ್ಲಿ) ಅಧಿಕ ಸಂಖ್ಯೆಯಲ್ಲಿ ಅಧಿಕಾರಸ್ಥ ರಾಜಕಾರಣಿಗಳೆ ವಿರಾಜಿಸುತ್ತ, ಸಾಹಿತ್ಯ ಸಮ್ಮೇಳನದ ಕೇಂದ್ರ ಬಿಂದುವಾದ ಸಮ್ಮೇಳನಾಧ್ಯಕ್ಷರ ಉಪಸ್ಥಿತಿಯೇ ನಗಣ್ಯವಾಗುವಂತ ಪರಿಸ್ಥಿತಿ ನಿಜವಾದ ಸಾಹಿತ್ಯಾಸಕ್ತರಿಗೆ ಕಿರಿಕಿರಿಯನ್ನುಂಟು ಮಾಡಿರುವ ಸಂದರ್ಭಗಳೂ ಉಂಟು. ಈ ಕುರಿತು ವ್ಯವಸ್ಥಾಪಕರು ಪುನರಾಲೋಚಿಸಬೇಕಾಗಿದೆ

ಮತ್ತು ರಾಜಕೀಯ ಕ್ಷೇತ್ರಗಳಲ್ಲಿದ್ದು ತೀವ್ರವಾದ ಸಾಹಿತ್ಯಕ ಕಾಳಜಿಗಳನ್ನುಳ್ಳ ಅಥವಾ ತಾವೇ ಸ್ವತಃ ಲೇಖಕರು ಆಗಿರಬಹುದಾದ ರಾಜಕಾರಣಿಗಳನ್ನು ಯಥೋಚಿತವಾಗಿ ಸಾಹಿತ್ಯ ಸಮ್ಮೇಳನದ ಕಾರ್ಯಕ್ರಮಗಳಲ್ಲಿ ತೊಡಗಿಸಿಕೊಳ್ಳುವುದು ಅಪೇಕ್ಷಣೀಯವಾಗಿದೆ.

ಸಾಹಿತ್ಯ ಸಮ್ಮೇಳನಗಳು ಈಗಾಗಲೇ ಬೆಳಕಿಗೆ ಬಂದ ಬರಹಗಾರರನ್ನು ಸಾಹಿತ್ಯಾಸಕ್ತರಿಗೆ ಪರಿಚಯ ಮಾಡಿಕೊಡುವ ವೇದಿಕೆಗಳೆ ಹೊರತು, ಹೊಸ ಪ್ರತಿಭೆಗಳನ್ನು ಹುಟ್ಟಿಸುವ ವೇದಿಕೆಗಳಲ್ಲ. ಸಾಹಿತ್ಯ ಸಮ್ಮೇಳನಗಳ ವಿಚಾರ ಗೋಷ್ಠಿಗಳಾಗಲಿ, ಕವಿ ಸಮ್ಮೇಳನಗಳಾಗಲಿ ಕರ್ನಾಟಕದ ವಿವಿಧ ಪ್ರಾದೇಶಿಕ ಪ್ರತಿಭೆಗಳಿಗೆ ಪ್ರಾತಿನಿಧ್ಯವನ್ನು ಕಲ್ಪಿಸುವಂತಿರಬೇಕು ಮತ್ತು ಹಳಬರನ್ನು ಹೊಸಬರನ್ನು ಜೊತೆಜೊತೆಯಾಗಿ ಪರಿಚಯಿಸುವಂತಿರಬೇಕು.

ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆಯೇ ಒಬ್ಬ ಸಾಹಿತಿಗೆ ಸಲ್ಲುವ ಮಹತ್ವದ ಗೌರವವಾಗಿರುವುದರಿಂದ ಸಮ್ಮೇಳನಾಧ್ಯಕ್ಷರಿಗೆ ದೊಡ್ಡ ಮೊತ್ತದ ಗೌರವ ಧನವನ್ನು ಅರ್ಪಿಸುವ (ಇತ್ತೀಚೆಗೆ ಪ್ರಾರಂಭವಾಗಿರುವ) ಪದ್ಧತಿಯನ್ನು ಕೂಡಲೇ ನಿಲ್ಲಿಸುವುದು ಅತ್ಯಗತ್ಯವಾಗಿದೆ.

ಸಾಹಿತ್ಯ ಸಮ್ಮೇಳನಗಳನ್ನು ಪ್ರತೀ ವರ್ಷವೂ ನಡೆಯಿಸುವ ಬದಲು ೨ ಅಥವಾ ೩ ವರ್ಷಗಳಿಗೆ ಒಮ್ಮೆ ಯಾಕೆ ಮಾಡಬಾರದು–ಎಂಬ ಪ್ರಶ್ನೆ ತೀರ ಹಳೆಯದು. ಇದು ಪರಿಷತ್ತಿನ ಅಧ್ಯಕ್ಷರ ಕರ್ತೃತ್ವ ಶಕ್ತಿಯನ್ನೂ, ಸಂಪನ್ಮೂಲಗಳನ್ನು ಕ್ರೋಢೀಕರಿಸುವ ಸಾಮರ್ಥ್ಯವನ್ನು ಅವಲಂಬಿಸಿದ ವಿಚಾರವಾಗಿದೆ.

---

## ಹಾವಿನ ಹಾಡು

ನಾಗರ ಹಾವೆ ಹಾವೊಳು ಹೂವೆ!
ಬಾಗಿಲ ಬಿಲದಲಿ ನಿನ್ನಯ ಠಾವೆ!
ಕೈಗಳ ಮುಗಿವೆ ಹಾಲನ್ನೀವೆ
ಬಾ ಬಾ ಬಾ ಬಾ ಬಾ ಬಾ ಬಾ

ಹಳದಿಯ ಹೆಡೆಯನು ಬಿಚ್ಚೋ ಬೇಗಾ!
ಹೊಳಹಿನ ಹೊಂದಲೆ ತೂಗೋ ನಾಗಾ!
ಕೊಳಲನ್ನೂದುವೆ ಲಾಲಿಸು ರಾಗ!
ನೀ ನೀ ನೀ ನೀ ನೀ ನೀ ನೀ ನೀ

ಬರಿಮೈ ತಣ್ಣಗೆ ಮನದಲಿ ಬಿಸಿ ಹಗೆ,
ಎರಡೆಳೆ ನಾಲಗೆ ಇದ್ದರೂ ಸುಮ್ಮಗೆ
ಎರಗುವೆ ನಿನಗೆ ಈಗಲೇ ಹೊರಗೆ
ಪೋ ಪೋ ಪೋ ಪೋ ಪೋ ಪೋ



–ಪಂಜೆ ಮಂಗೇಶರಾಯ



## ಬೆಳಗಾವಿ ಸಾಹಿತ್ಯ ಸಮ್ಮೇಳನ ; ಒಂದು ಇಣುಕು ನೋಟ

ಬೆಳಗಾವಿಯಲ್ಲಿ ನಡೆದ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಮೊದಲನೇ ದಿನ ಕೇಂದ್ರ ಬಸ್ ನಿಲ್ದಾಣದಲ್ಲಿಳಿದಾಗ ಎಲ್ಲಿ ನೋಡಿದರೂ ಜನವೋ ಜನ. ಬೆಳಗಾವಿ ಬಸ್ ನಿಲ್ದಾಣ ಸಾಹಿತ್ಯ ಪ್ರೇಮಿಗಳಿಂದ ತುಂಬಿ ಹೋಗಿತ್ತು. ನಗರ ಬಸ್ ನಿಲ್ದಾಣದ ಹತ್ತಿರ ಬಂದಾಗ ಎಲ್ಲಿ ನೋಡಿದರೂ ಸಾಹಿತ್ಯ ಸಮ್ಮೇಳನಕ್ಕೆ ಸ್ವಾಗತ ಕೋರುತ್ತಿದ್ದ ಬ್ಯಾನರ್‌ಗಳೇ ರಾರಾಜಿಸುತ್ತಿದ್ದವು. ನಗರವೆಲ್ಲಾ ತಳಿರು ತೋರಣಗಳಿಂದ ಸಿಂಗರಿಸಲ್ಪಟ್ಟಿತ್ತು. ಸಾಹಿತ್ಯ ಸಮ್ಮೇಳನದ ಸಲುವಾಗಿ ವಿಶೇಷ ಬಸ್‌ಗಳನ್ನು ವ್ಯವಸ್ಥೆ ಮಾಡಲಾಗಿತ್ತು.

ಸಿಟಿ ಬಸ್‌ನಿಂದ ಸಮ್ಮೇಳನ ನಡೆದ ಸ್ಥಳದಲ್ಲಿ ಬಂದು ನಿಂತಾಗ ಯಾವ ಕಡೆಗೆ ಹೋಗಬೇಕು ತಿಳಿಯಲಿಲ್ಲ. ಎಲ್ಲೆಡೆ ಜನಸಾಗರ. ಸುತ್ತೆಲ್ಲಾ ಟ್ರಾಫಿಕ್ ಜಾಮ್ ಆಗಿತ್ತು. ಜಿಲ್ಲಾ ಕ್ರೀಡಾಂಗಣದ ಒಳ ಹೊಕ್ಕಾಗ ಒಂದು ವಿಶಾಲವಾದ ಮಂಟಪ ಕಂಡು ಬಂತು. ಆ ಮಂಟಪದ ಮಹಾದ್ವಾರಕ್ಕೆ ಖ್ಯಾತ ಕಥೆ-ಕಾದಂಬರಿಕಾರ ಬಸವರಾಜ ಕಟ್ಟೀಮನಿ ಅವರ ಹೆಸರಿಡಲಾಗಿತ್ತು. ನನಗಂತೂ ತುಂಬಾ ಖುಷಿಯಾಗಿತ್ತು. ಏಕೆಂದರೆ ಕಟ್ಟೀಮನಿಯವರ ಕಥೆಗಳನ್ನು ಓದಿ ತುಂಬಾ ಮೆಚ್ಚಿಕೊಂಡವನು ನಾನು.

ಮಂಟಪದಲ್ಲಿ ಸಾಹಿತ್ಯ ಪ್ರೇಮಿಗಳು ಕುಳಿತುಕೊಳ್ಳಲು ಸಾಕಷ್ಟು ಕುರ್ಚಿಗಳು ಇದ್ದವು. ನಡುನಡುವೆ ಟಿ.ವಿ.ಗಳನ್ನು ಇಡಲಾಗಿತ್ತು. ಮುಖ್ಯ ವೇದಿಕೆಯನ್ನು ತುಂಬಾ ಸುಂದರವಾಗಿ ಅಲಂಕರಿಸಲಾಗಿತ್ತು. ಮೊದಲ ದಿನ ಶುಕ್ರವಾರ ಸಮ್ಮೇಳನಾಧ್ಯಕ್ಷರ ಮೆರವಣಿಗೆ ಯಶಸ್ವಿಯಾಗಿ ನಡೆಯಿತು. ಮಧ್ಯಾಹ್ನ ಸಮ್ಮೇಳನವನ್ನು ಅದ್ದೂರಿಯಾಗಿ ಉದ್ಘಾಟಿಸಲಾಯಿತು. ಎಲ್ಲರೂ ಡಾ|| ಪಾಟೀಲ ಪುಟ್ಟಪ್ಪನವರ ಭಾಷಣ ಕೇಳಲು ಕಾತುರರಾಗಿದ್ದರು. ಸಮ್ಮೇಳನದ ಅಧ್ಯಕ್ಷಿಯ ಭಾಷಣ ಮಾಡಿದ ಪಾಪು ಜನರಿಂದ ಚಪ್ಪಾಳೆ ಗಿಟ್ಟಿಸಿಕೊಂಡರು. ನೇರ ನುಡಿ, ಧೈರ್ಯಶಾಲಿ, ಧೀಮಂತ ಪತ್ರಕರ್ತರಾದ ಪಾಪು ಒಂದು ತಾಸು ಭಾಷಣ ಮಾಡಿದರೂ ಯಾರೂ ಕುಳಿತಲ್ಲಿಂದ ಮಿಸುಕಾಡಲಿಲ್ಲ. 'ಬೆಳಗಾವಿ ಎಂದೆಂದಿಗೂ ನಮ್ಮದು ಅದನ್ನು ಯಾರೂ ಕಿತ್ತುಕೊಳ್ಳಲು ಸಾಧ್ಯವಿಲ್ಲ' ಎಂದು ನುಡಿದರು. 'ಎಲ್ಲರೂ ಕನ್ನಡದಲ್ಲಿಯೇ ಮಾತನಾಡಬೇಕು ಮತ್ತು ಕನ್ನಡದಲ್ಲಿಯೇ ಅಂಕಿ ಬರೆಯಬೇಕು' ಎಂದು ವಿನಂತಿಸಿದರು. ಪಾಪು ತಮ್ಮ ಭಾಷಣದಲ್ಲಿ ಸಾಮಾನ್ಯ ಜನರಲ್ಲಿ ಪುಸ್ತಕ ಓದುವ ಹವ್ಯಾಸ ಕಡಿಮೆಯಾಗುತ್ತಿದೆ ಎಂದು ತಿಳಿಸಿ ಪುಸ್ತಕ ಓದುವ ಹವ್ಯಾಸ ಬೆಳೆಸಿಕೊಳ್ಳಬೇಕು ಎಂದು ನುಡಿದರು. ಸರ್ಕಾರವು ಸುಲಭ ಬೆಲೆಯಲ್ಲಿ ಪುಸ್ತಕ ದೊರಕುವಂತೆ ಮಾಡಬೇಕು ಎಂದು ಆಗ್ರಹಿಸಿದರು.

'ಬೆಳಗಾವಿಯಲ್ಲಿ ಚಳಿಗಾಲ ಅಧಿವೇಶನ ನಡೆಯಬೇಕು, ಪ್ರತ್ಯೇಕ ಮಕ್ಕಳ ಸಾಹಿತ್ಯ ಅಕಾಡೆಮಿ ಸ್ಥಾಪನೆ, ಮಹಾಜನ ಹಾಗೂ ಡಾ|| ನಂಜುಂಡಪ್ಪ ವರದಿ ಜಾರಿಗೆ ನಿರ್ಣಯ, ಎಲ್ಲಾ ಹಂತದಲ್ಲೂ ಕನ್ನಡ ಕಡ್ಡಾಯವಾಗಬೇಕು' ಎಂಬ ನಿರ್ಣಯಗಳನ್ನು ಸಮ್ಮೇಳನದ ಅಧ್ಯಕ್ಷ ಪಾಪು ಅವರ ಸಮ್ಮುಖದಲ್ಲಿ ಕೈಗೊಳ್ಳಲಾಯಿತು.

ಮೊದಲ ದಿನ ಸಂಜೆ ತುಂಬಾ ಉತ್ತಮ ಕವಿಗೋಷ್ಠಿ ನಡೆಯಿತು. ಹಲವು ಹಳೇ ಮುಖಗಳೊಂದಿಗೆ ಕೆಲವು ಹೊಸ ಮುಖಗಳು ಕಂಡು ಬಂದವು. ಕವನಗಳು ಅಷ್ಟೇನು ತೃಪ್ತಿಕರವಾಗಿರದಿದ್ದರೂ ಸಾಧಾರಣವಾಗಿದ್ದವೂ ಎಂದರೆ ತಪ್ಪಾಗಲಾರದು. ವಿವಿಧ ವಿಚಾರಗೋಷ್ಠಿಗಳು ಸ್ವಲ್ಪ ತಡವಾದರೂ ವ್ಯವಸ್ಥಿತವಾಗಿ ನಡೆದವು. ಎರಡನೇ ದಿನ ಜನರ ಉತ್ಸಾಹ

ಇಮ್ಮಡಿಯಾಗಿತ್ತು. ಸಭಾಂಗಣ ತುಂಬಿ ಬಹಳಷ್ಟು ಜನ ನಿಂತೇ ವೀಕ್ಷಿಸಬೇಕಾಯಿತು. ಮೊದಲ ದಿನಕ್ಕಿಂತ ಎರಡನೇ ದಿನ ಊಟದ ವ್ಯವಸ್ಥೆ ತುಂಬಾ ಉತ್ತಮವಾಗಿತ್ತು. ತುಂಬಾ ರುಚಿಕಟ್ಟಾದ ಊಟವನ್ನು ವ್ಯವಸ್ಥಿತವಾಗಿ ನೀಡಲಾಯಿತು. ಸಭಾಂಗಣ ಹಿಂದುಗಡೆ ಸುಮಾರು ೩೦೦ ಪುಸ್ತಕ ಮಳಿಗೆಗಳನ್ನು ಸ್ಥಾಪಿಸಲಾಗಿತ್ತು. ಕರ್ನಾಟಕದ ಮೂಲೆ ಮೂಲೆಗಳಿಂದ ಪ್ರಕಾಶನ ಸಂಸ್ಥೆಗಳು ತಮ್ಮ ಮಳಿಗೆಗಳನ್ನು ತೆರೆದಿದ್ದವು. ಬೇರೆ ಬೇರೆ ಅಂಗಡಿಗಳೂ ಅಲ್ಲಿದ್ದವು. ಕೇವಲ ಪತ್ರಿಕೆಗಳಲ್ಲಿ ಕಾಣ ಸಿಗುತ್ತಿದ್ದ ಪ್ರಕಾಶನ ಸಂಸ್ಥೆಗಳು ನನ್ನ ಕಣ್ಣ ಮುಂದೆ ಬಂದು ನಿಂತಿದ್ದವು. ಸಾಹಿತ್ಯದಲ್ಲಿನ ಎಲ್ಲಾ ಪ್ರಕಾರದ ಪುಸ್ತಕಗಳು ಲಭ್ಯವಿದ್ದವು. ಎಲ್ಲಾ ಪುಸ್ತಕ ಮಳಿಗೆಗಳಲ್ಲೂ ವಿಶೇಷ ರಿಯಾಯಿತಿಗಳಿದ್ದವು. ಸಾಹಿತ್ಯಾಸಕ್ತರು ತುಂಬಾ ಖುಷಿಯಿಂದ ಪುಸ್ತಕಗಳನ್ನು ಖರೀದಿಸಿದರು.

ನನ್ನ ಪ್ರಕಾರ ಹೇಳುವುದಾದರೆ ಎಲ್ಲಾ ಪ್ರಕಾರದ ಪುಸ್ತಕಗಳು ಅಲ್ಲಿದ್ದವು. ಹಳೆಯದಿಂದ ಹಿಡಿದು ಅಚ್ಚ ಹೊಸದಾಗಿ ಪ್ರಕಟಗೊಂಡ ಪುಸ್ತಕಗಳು ಲಭ್ಯವಿದ್ದವು. ಒಟ್ಟಿನಲ್ಲಿ ಓದುಗರ ಸಂಖ್ಯೆಯು ಕಡಿಮೆಯಾಗಿಲ್ಲ ಅನ್ನೋದು ಖುಷಿಯ ಸಂಗತಿ. ಪುಸ್ತಕ ಖರೀದಿಯಲ್ಲಿದ್ದ ಜನರಷ್ಟೇ ಜನರು ಸಭಾಂಗಣದಲ್ಲಿಯೂ ಮತ್ತು ಊಟದ ಮಂಟಪದಲ್ಲಿಯೂ ಇದ್ದರು. ಉಳಿದ ಜನ ರಸ್ತೆಯಲ್ಲಿ ನೆರೆದಿದ್ದ ಜಾತ್ರೆಯಲ್ಲಿ ಪಾಲ್ಗೊಂಡಿದ್ದರು. ಹಿರಿಯರಿಗೆ ಇದು ಸಮ್ಮೇಳನವಾಗಿದ್ದರೆ ಮಕ್ಕಳಿಗೆ ಜಾತ್ರೆಯಾಗಿತ್ತು ಎಂದರೆ ತಪ್ಪಾಗಲಾರದು.

ಮೂರನೇ ದಿನ ರವಿವಾರ ಸಮ್ಮೇಳನದ ಕೊನೆಯ ದಿನ. 'ಬೆಳಗಾವಿ ಎಂಬ ನಗರವೇ ಸಮ್ಮೇಳನಕ್ಕೆ ಕುಟುಂಬ ಸಮೇತವೇ ಬಂದಿತ್ತು'. ಕೊನೆಯ ದಿನ ಸಮ್ಮೇಳನಕ್ಕೆ ಹೊಸ ಕಳೆ ಇತ್ತು. ಜನಸಂಖ್ಯೆಯಲ್ಲಿ ಹೆಚ್ಚಳ ಕಂಡು ಬಂತು. ಗೋಷ್ಠಿಗಳು ತುಂಬಾ ಚಟುವಟಿಕೆಯಿಂದ ಸಾಗಿದ್ದವು. ಸಮ್ಮೇಳನಾಧ್ಯಕ್ಷರಾದ ಪಾಪು ಎಲ್ಲಾ ಗೋಷ್ಠಿಗಳಲ್ಲೂ ಉಪಸ್ಥಿತರಿದ್ದುದು ವಿಶೇಷವಾಗಿತ್ತು. ಎರಡನೇ ಕವಿಗೋಷ್ಠಿಯಲ್ಲಿ ಬಹಳಷ್ಟು ಖ್ಯಾತನಾಮರೇ ಇದ್ದರು. ಆದರೆ ಬೆಂಗಳೂರಿನ ಐವರು ಖ್ಯಾತ ಕವಿಗಳು ಗೈರು ಹಾಜರಿದ್ದರು. ಇವರನ್ನು ಬಿಟ್ಟು ಉಳಿದ ಯುವಕವಿಗಳಿಗೆ ಅವಕಾಶ ಕೊಟ್ಟಿದ್ದರೆ ಚೆನ್ನಾಗಿರುತ್ತಿತ್ತು. ಕವಿಗೋಷ್ಠಿಯಲ್ಲಿ ಕಣವಿ, ಚಂಪಾ, ಡಾ|| ಸರಜೂ ಕಾಟ್ಕರ್, ಲತಾ ಗುತ್ತಿ, ಭಾಗೀರಥಿ ಹೆಗಡೆ, ಡಾ|| ನಾ. ಮೊಗಸಾಲೆ ಗಮನ ಸೆಳೆದರು. ಮಧ್ಯಾಹ್ನ ಮೂರು ಗಂಟೆಗೆ ಗಣ್ಯರನ್ನು ಸನ್ಮಾನಿಸುತ್ತಿದ್ದರೆ ಯಾರಿಗೂ ಅದರಲ್ಲಿ ಆಸಕ್ತಿ ಇರಲಿಲ್ಲ. ಬಹಳಷ್ಟು ಜನ ಊಟಕ್ಕೆ ಎದ್ದು ಹೋಗಿದ್ದರು. ಇನ್ನಷ್ಟು ಜನ ಪುಸ್ತಕ ಖರೀದಿಯಲ್ಲಿ ತೊಡಗಿದ್ದರು. ಸಂಜೆಯಾದಂತೆ ಜನರಲ್ಲಿ ಉತ್ಸಾಹ ಏರತೊಡಗಿತ್ತು. ಸಮ್ಮೇಳನ ಎರಡು ದಿನ ಯಶಸ್ವಿಯಾಗಿ ಮುಗಿಸಿ ಮೂರನೇ ದಿನದ ಅಂತಿಮ ಹಂತಕ್ಕೆ ಬಂದು ಮುಟ್ಟಿತ್ತು. ಪುಸ್ತಕಗಳ, ತಂಪು ಪಾನೀಯಗಳ, ಇನ್ನಿತರ ವಸ್ತುಗಳ ಮಾರಾಟ ಬಿಸಿಯಾಗಿತ್ತು. ರವಿವಾರ ಸಂಜೆ ಕೊನೆಯ ಸಮಾರೋಪ ಸಮಾರಂಭ ಔಪಚಾರಿಕವಾಗಿ ನಡೆಯಿತು. ಸಮ್ಮೇಳನದಲ್ಲಿ ಕೈಗೊಳ್ಳಲಾದ ನಿರ್ಣಯಗಳನ್ನು ಆದಷ್ಟು ಬೇಗನೆ ಜಾರಿಗೊಳಿಸಬೇಕು ಎಂದು ಸರ್ಕಾರಕ್ಕೆ ಒತ್ತಾಯಿಸಲಾಯಿತು. ಮೂರೂ ದಿನ ಭಾಗವಹಿಸಿದ್ದ ಎಲ್ಲಾ ಜನರನ್ನು ಬೀಳ್ಕೊಡಲಾಯಿತು. ಒಟ್ಟಿನಲ್ಲಿ ಹೇಳಬೇಕಾದರೆ ಅಖಿಲ ಭಾರತ ೭೦ನೇ ಕನ್ನಡ ಸಾಹಿತ್ಯ ಸಮ್ಮೇಳನ ಬೆಳಗಾವಿಯಲ್ಲಿ ಯಶಸ್ವಿಯಾಗಿ ನಡೆಯಿತು. ಅಲ್ಪ ಸ್ವಲ್ಪ ದೋಷಗಳು ಕಂಡು ಬಂದರೂ ಸಹ ಸಮ್ಮೇಳನದ ಶೋಭೆಗೆ ಯಾವುದೇ ರೀತಿಯ ಧಕ್ಕೆ ತರಲಿಲ್ಲ. ಸುವ್ಯವಸ್ಥಿತವಾದ ಗೋಷ್ಠಿಗಳು, ಕವಿಗೋಷ್ಠಿಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು ಮತ್ತು ರುಚಿಕಟ್ಟಾದ ಊಟ ಇವು ಸಮ್ಮೇಳನದ ಯಶಸ್ಸಿಗೆ ಕಾರಣವಾದವು. ನನ್ನ ಕನಸಿನ ಸಾಹಿತ್ಯ ಸಮ್ಮೇಳನವನ್ನು ಮುಗಿಸಿ ಮರಳಿ ಬರಲು ಮನಸ್ಸಾಗಲಿಲ್ಲ. ಕೊನೆಯ ದಿನ ಊರಿಗೆ ಮರಳುವಾಗ ಬಸ್ಸಿನಿಂದ ಹೊರಗೆ ಇಣುಕಿದಾಗ ಕನ್ನಡ ಬಾವುಟ ಮುಗಿಲೆತ್ತರಕ್ಕೆ ಹಾರಾಡುತ್ತಿತ್ತು.

**–ಖುರ್ಷಿದ್ ಆಲಂ ಮೋಮಿನ**



# ನವಲಗುಂದದ ಅತ್ತಿಮಬ್ಬೆ ಮಂಜುಳಾ ಬೆಂಡಿಗೇರಿ

ಕನ್ನಡದ ಈ ಪುಣ್ಯ ಭೂಮಿಯಲ್ಲಿ ಅನೇಕ ಶಿವಶರಣೆಯರು, ವೀರವನಿತೆಯರು ಈ ನಾಡಿನ ಕೀರ್ತಿಯನ್ನು ಹೆಚ್ಚಿಸಿ ಜನ ಮನ ಗೆದ್ದಿದ್ದಾರೆ.

ಇತಿಹಾಸ ನಾಡಿಗಿರುವಂತೆ ನಾಡಾಡಿಗಳಿಗೂ ಇದೆ. ಹೀಗಿದ್ದಲ್ಲಿ ಮಹಾ ಪುರುಷರು ವೀರ ವನಿತೆಯರಿಗೆ ಇತಿಹಾಸವಿಲ್ಲವೆಂದರೆ ಯಾರೂ ಒಪ್ಪಲಾರರು. ಅವರವರ ಚರಿತ್ರೆ ಅಮೋಘ ಸಾಧನೆ ಅವರ ಬೆನ್ನ ಹಿಂದೆಯೇ ಹೆಪ್ಪುಗಟ್ಟಿ ನಿಂತಿರುತ್ತದೆ. ಅದನ್ನು ಗುರುತಿಸುವ ಕಣ್ಣು ಬೇಕು, ತಿಳಿಯುವ ಮನಸ್ಸು ಬೇಕು. ಅಂದರೇನೆ ಮಾತ್ರ ಮಹಿಮರ ಸರ್ವತೋಮುಖ ವ್ಯಕ್ತಿತ್ವ ನಮಗೆ ಹೊಳೆಯಬಲ್ಲದು.

ನಾವಿರುವುದು ತಾಂತ್ರಿಕ ಯುಗದಲ್ಲಿ. ನಮ್ಮ ಜೀವನ ದುರಾಚಾರ, ನಿಂದನೆ, ಅಸೂಯೆ. ಸ್ವಾರ್ಥ, ಕಪಟಗಳಿಂದಲೇ ತುಂಬಿದ ಇಂತಹ ಕಲುಷಿತ ವಾತಾವರಣದಲ್ಲಿಯೂ ಪ್ರೀತಿ, ಭಕ್ತಿ, ತ್ಯಾಗ, ಸದ್ಗುಣ, ಸದಾಚಾರಗಳ ಗುಣಗಳುಳ್ಳವರು ಸಿಗುವುದು ಅಪರೂಪವೆಂದೇ ಹೇಳಬಹುದು. ಅಂತಹ ಅಪರೂಪದ ವ್ಯಕ್ತಿಗಳಲ್ಲಿ ನವಲಗುಂದದ ಮಂಜುಳಾ ಬಸಪ್ಪ ಬೆಂಡಿಗೇರಿಯವರು. ನಾಡಿನ ಹೆಸರಾಂತ ಮಾತೆಯರಲ್ಲಿ ಒಬ್ಬರೆಂದು ಹೇಳಿದರೆ ತಪ್ಪಾಗಲಾರದು.

ಮಂಜುಳಾ ಬಸಪ್ಪ ಬೆಂಡಿಗೇರಿಯವರು ೧೯೫೪ ಡಿಸೆಂಬರ್ ೧೨ರಂದು ಶಿವಮೊಗ್ಗೆಯ ಶ್ರೀಮಲ್ಲಿಕಾರ್ಜುನ ಹಾಗೂ ನಾಗಮ್ಮನವರ ಮಗಳಾಗಿ ಜನಿಸಿದರು. ತಮ್ಮ ಹದಿನೇಳನೆ ವಯಸ್ಸಿನಲ್ಲಿ ನವಲಗುಂದದ ಗೌರವಾನ್ವಿತ ಮನೆತನದ ಬಸಪ್ಪನವರ ಸತಿಯಾಗಿ ಬದುಕನ್ನು ನಡೆಸುತ್ತಿದ್ದಾರೆ. ಸರಳ, ಸಹಕಾರ ಮೂರ್ತಿಯಾದ ಇವರಿಗೆ ಅಧಿಕಾರ ಶ್ರೀಮಂತಿಕೆಯ ಅಭಿಮಾನವಿಲ್ಲ. ಪ್ರತಿಯೊಬ್ಬರ ಸುಖ ದುಃಖಗಳಲ್ಲಿ ಭಾಗಿಯಾಗುವ ಮನಸ್ಸು ಇವರದು. ಮೇಲಾಗಿ ದಾನಕ್ಕೆ ಮಿಗಿಲಾದ ಕೈ, ಮಾತೃ ಹೃದಯ ಎಂತವರನ್ನು ಮಕ್ಕಳಂತೆ ಉಪಚರಿಸುತ್ತದೆ. ಹೃದಯ ಶ್ರೀಮಂತಿಕೆಯಲ್ಲದೆ ಸಾಮಾಜಿಕ, ಸಂಸ್ಕೃತಿ, ಸಂಪ್ರದಾಯಗಳನ್ನು ಮುನ್ನಡೆಸಿಕೊಂಡು ಹೋಗುವ ಆದರ್ಶ ಗುಣ ಉಳ್ಳವರು.

ಶಾಂತ ಕಳೆಯೊಂದಿಗೆ ಲಾಸ್ಯವಾಡುತ್ತಿರುವ ಇವರದು ಭಕ್ತಿ ತ್ಯಾಗಗಳಿಂದ ಭರಿತ ಜೀವನ. ಅಕಸ್ಮಾತ್ ರಾಜಕೀಯ ಬದುಕಿನಲ್ಲಿ ಪ್ರವೇಶಿಸಿ ತಮ್ಮ ತತ್ವಗಳಿಗೆ ಬದ್ಧರಾಗಿ ೧೯೯೬ರಿಂದ ಎರಡೂವರೆ ವರ್ಷ ಪಟ್ಟಣ ಪಂಚಾಯತಿಯ ಅಧ್ಯಕ್ಷರಾಗಿ ಸಮಾಜ ಸೇವೆ ಸಲ್ಲಿಸಿದ್ದಾರೆ. ಆದರ್ಶ ಗೃಹಿಣಿಯಾಗಿ ಉದಾತ್ತ ಭಾವದಿಂದ ನವಲಗುಂದದ ಅತ್ತಿಮಬ್ಬೆ ಎಂದೆನಿಸಿಕೊಳ್ಳುವ ಗೌರವಕ್ಕೆ ಪಾತ್ರರಾಗಿದ್ದಾರೆ. –ಎಸ್.ಎಚ್.ಲಂಬೂನವರ, ನಾಗನೂರ



ಸರೋಜ ನಾರಾಯಣರಾವ್
ನಂ. ೨೧೫೫, ಡಬಲ್ ರಸ್ತೆ, ಇಂದಿರಾನಗರ, ೨ನೇ ಹಂತ, ಬೆಂಗಳೂರು-೩೮.

## ಅಮೆರಿಕದಲ್ಲಿ ನಾವು

### ಭಾಗ-೬

### ಅವರದೇ ಸಂಸ್ಕೃತಿ-ಅವರದೇ ಜೀವನ

ಆಮಿಶ್ ತಯಾರಿಸುವ ಕರಕುಶಲ ವಸ್ತುಗಳ ಮಳಿಗೆಯೊಂದಿದೆ. ಅಲ್ಲಿ ನಾವು ಕೆಲವು ಸುಂದರ ವಸ್ತುಗಳನ್ನು ಕೊಂಡೆವು. ನಂತರ ಮರಗಳ ಕೆಳಗೆ ಬೆಂಚಿನ ಮೇಲೆ ಕುಳಿತು ಮನೆಯಿಂದಲೇ ತಂದಿದ್ದ ರುಚಿಯಾದ ತಿಂಡಿಗಳನ್ನು ತಿಂದೆವು. ಮತ್ತೊಮ್ಮೆ ಆಚೆ ಓಡಾಡುತ್ತಾ ಫೋಟೋಗಳನ್ನು ತೆಗೆದೆವು. ನಮ್ಮನ್ನು ನೋಡಿದ ಬೇರೆ ಪ್ರವಾಸಿಯೊಬ್ಬರು 'ನೀವೆಲ್ಲ ಒಟ್ಟಿಗೆ ನಿಲ್ಲಿ, ಬೇಕಾದರೆ ನಾನೊಂದು ಫೋಟೋ ತೆಗೆಯುತ್ತೇನೆ' ಎಂದರು. ಹಾಗೆ ನಮ್ಮನ್ನು ಮಾತನಾಡಿಸುತ್ತ ನೀವು ಎಲ್ಲಿಂದ ಬಂದಿರುವುದು ಎಂದು ಕೇಳಿದರು.

ಭಾರತ ಎಂದು ಹೇಳಿದಾಗ, 'ನೋಡಿದರೇ ಅದು ತಿಳಿಯುತ್ತದೆ. ಭಾರತದಲ್ಲಿ ಎಲ್ಲಿಂದ?' ಬೆಂಗಳೂರು. ಕೇಳಿದ್ದೇನೆ., ನೋಡಿಲ್ಲ. ಮುಂಬಯಿಯಿಂದ ದಕ್ಷಿಣಕ್ಕಿರಬೇಕಲ್ಲವೆ? ಹೌದು ಎಂದು ಹೇಳಿ, ನಮ್ಮ ಬೆಂಗಳೂರಿನ ವಿಚಾರ ಸ್ವಲ್ಪ ಹೇಳಿದೆವು. ನಾನು ಭಾರತಕ್ಕೆ ಬಂದಿದ್ದೇನೆ. ಆಗ್ರಾ, ಉದಯ್‌ಪುರ ಎಲ್ಲ ನೋಡಿದ್ದೇನೆ. ಭಾರತೀಯರು ಒಳ್ಳೆಯವರು. Very Hospitable and Nice People ಎಂದರು. ಆತ ಹಾಲೆಂಡ್‌ನವರಂತೆ. ನನ್ನವರು ಹಿಂದೆ ಯೂರೋಪ್ ಪ್ರವಾಸ ಹೋಗಿದ್ದಾಗ ತಾವು ಹಾಲೆಂಡಿಗೆ ಹೋಗಿದ್ದುದನ್ನು ತಿಳಿಸಿದರು. ಆತನಿಗೆ ಬಹಳ ಸಂತೋಷವಾಯಿತು. ಎಷ್ಟೋ ದಿನಗಳ ಪರಿಚಿತರಂತೆ ಸ್ವಲ್ಪ ಹೊತ್ತು ಮಾತನಾಡುತ್ತಿದ್ದರು.

ಆಮಿಶ್ ಜನರ ಜೀವನ ಶೈಲಿಯನ್ನು ಕಂಡು ಅವರ ಬಗ್ಗೆ ಹೆಚ್ಚು ತಿಳಿಯಬೇಕೆಂಬ ಕುತೂಹಲ ಮೂಡಿತು. ತಿಳಿದಾಗ ವಿಸ್ಮಯವೂ ಆಯಿತು. ಯೂರೋಪಿಯನ್ ರಾಷ್ಟ್ರಗಳಿಂದ ಅಮೆರಿಕೆಗೆ ಬಂದು ನೆಲೆಸಿರುವ ಹಲವು ಜನಾಂಗಗಳ ಪೈಕಿ ಆಮಿಶ್ ಸಹ ಒಂದು. ಫ್ರೆಂಚ್ ರೆವೆಲ್ಯೂಶನ್ನಿನ ನಂತರ ತಾಯ್ನಾಡನ್ನು ತೊರೆದು ಅಲ್ಲಲ್ಲಿ ಚದುರಿ ಹೋದರು ಈ ಜನ. ಆಗ ಸುಮಾರು ಮುನ್ನೂರು ಕುಟುಂಬಗಳು ಅಮೆರಿಕಾಗೆ ಬಂದವು. ಇವರಲ್ಲಿ ಬಹುಮಂದಿ ವ್ಯವಸಾಯ ಕಾರ್ಯಗಳಲ್ಲಿ ನಿಸ್ಸೀಮರು. ಇದೀಗ ದೇಶದ ಬೇರೆ ಬೇರೆ ಭಾಗಗಳಲ್ಲಿ ಒಟ್ಟು ೬೦ ಸಾವಿರ ಆಮಿಶ್ ಜನರಿರುವರಂತೆ. ತಮ್ಮದೇ ಆದ ಜೀವನ ಶೈಲಿ, ನಂಬಿಕೆಗಳನ್ನು ಹೊಂದಿದ್ದಾರೆ. ಸ್ವಲ್ಪ ಗಮನಿಸಿದರೆ ಊರಿನ ಸುತ್ತಮುತ್ತ ಹಳೆಕಾಲದ ಕುದುರೆ ಗಾಡಿಗಳಲ್ಲಿ ಹೋಗುವುದನ್ನು ಕಾಣಬಹುದು. ಆಮಿಶ್ ತಾಯ್ತಂದೆಯರಿಗೆ ಅವರ ಮಕ್ಕಳು ಓದು ಬರಹ ಕಲಿಯಬೇಕೆಂಬ ಆಸೆ ಇದೆ. ಆದರೆ ವ್ಯವಸಾಯ, [illegible] ಮುಂತಾದ್ದನ್ನು ಮನೆಯಲ್ಲೇ ಹಿರಿಯರಿಂದ ಕಲಿಯಬಹುದೆಂಬ ನಂಬಿಕೆ ಇದೆ. ಶಾಲಾ ಕಾಲೇಜು ಎಂದು ಹೋಗುವುದರಿಂದ ಸುಮ್ಮನೆ

ಸಮಯ ವ್ಯರ್ಥ ಎಂದು ಭಾವಿಸುತ್ತಾರೆ. ಅಲ್ಲದೆ ಅಂತಹ ವಿದ್ಯಾಭ್ಯಾಸದಿಂದ ಹೊರಗಿನ ಪ್ರಭಾವಗಳಿಗೆ ಒಳಗಾಗಿ ಬಿಡುತ್ತಾರೆ ಎನ್ನುವ ಆತಂಕವೂ ಇದೆ.

೧೯೭೨ರಲ್ಲಿ ಇಲ್ಲಿಯ ಸುಪ್ರೀಂಕೋರ್ಟ್ ಒಂದು ಸರ್ವಾನುಮತದ ಆಜ್ಞೆಯನ್ನು ಹೊರಡಿಸಿತು. ಹಳೇ ಆಮಿಶ್ ಮತ್ತು ಸಂಬಂಧಪಟ್ಟ ವರ್ಗದವರಿಗೆ ೮ನೇ ತರಗತಿಯ ನಂತರ ವಿದ್ಯಾಭ್ಯಾಸವನ್ನು ಮುಂದುವರಿಸಬೇಕೆಂಬ ಕಡಾಯವಿಲ್ಲ ಎನ್ನುವುದೇ ಈ ಆಜ್ಞೆ. ಆದರೆ ಅವರಲ್ಲೇ ಸ್ವಲ್ಪ ಮುಂದುವರಿದ ವರ್ಗಗಳು ಹೈಸ್ಕೂಲಿಗೆ ಹಾಗೂ ಕಾಲೇಜಿಗೆ ಸಹ ಹೋಗುವುದುಂಟು. ಇವರು ಮನೆಯಲ್ಲಿ ಮಾತಾಡುವ ಭಾಷೆ-ಜರ್ಮನ್ ಮತ್ತು ಪೆನ್ಸಿಲ್‌ವೇನಿಯನ್ ಡಚ್ ಎನ್ನುವ ಭಾಷೆಗಳ ಬೆರಕೆಯಾಗಿರುತ್ತದೆ. ಪ್ರಾರ್ಥನೆಗೆ ಶುದ್ಧ ಜರ್ಮನ್ ಬಳಸುತ್ತಾರೆ. ತಮ್ಮವರಲ್ಲದ ಜನರೊಡನೆ ಮಾತಾಡುವಾಗ ಮಾತ್ರ ಇಂಗ್ಲೀಷ್‌ನಲ್ಲಿ ಮಾತನಾಡುತ್ತಾರೆ. ಆಮಿಶ್ ಪದದಲ್ಲಿ ಆ ಎನ್ನುವುದನ್ನು ಸ್ವಲ್ಪ ಎಳೆದು ಆ.....ಹ್‌ಮಿಶ್ ಎಂದು ಕೇಳಿಸುವ ಹಾಗೆ ಉಚ್ಚರಿಸುತ್ತಾರೆ. ಈ ಜನರಲ್ಲಿ ಒಗ್ಗಟ್ಟಿದೆ. ಆಧುನಿಕ ಜಗತ್ತಿನಲ್ಲೂ ಹೆಚ್ಚು ಬದಲಾಗದಂತೆ ದೇವರೆ ತಮ್ಮನ್ನು ಹೀಗೆ ಒಗ್ಗಟ್ಟಾಗಿ ಇಟ್ಟಿದ್ದಾನೆ ಎಂದು ನಂಬಿದ್ದಾರೆ. ಇವರ ಉಡುಗೆ ತೊಡುಗೆಗಳು ಆಧುನಿಕವಲ್ಲ. ಅಮೆರಿಕಾದಿಂದ ಬಹುದೂರ ಇರುವ ರಾಷ್ಟ್ರಗಳಲ್ಲೇ ಇಲ್ಲಿಯ ಫ್ಯಾಶನ್ನಿನ ಅಂಧಾನುಕರಣ ನಡೆಸಿರುವಾಗ ಇವರು ಮಾತ್ರ ಆ ಚಪಲಕ್ಕೆ ಬಿದ್ದಿಲ್ಲ. ಪಾದದವರೆಗೆ ಇರುವ ನಿರಿಗೆ ನಿರಿಗೆಯಾದ ಲಂಗ, ತೋಳು ಮುಚ್ಚುವ ಮೇಲಂಗಿ, ಒಂದು ಮೇಲು ಹೊದಿಕೆ ಧರಿಸುತ್ತಾರೆ. ಇವರು ಕೂದಲನ್ನು ಕತ್ತರಿಸುವುದಿಲ್ಲ. ಮಹಿಳೆಯರು ಒಡವೆಗಳನ್ನು ಧರಿಸುವುದಿಲ್ಲ! ವಿವಾಹದ ಸಮಯದಲ್ಲಿ ಸಹ ಹುಡುಗನು ಹುಡುಗಿಗೆ ಉಂಗುರ ಅಥವಾ ಬೇರೆ ಯಾವುದೇ ಆಭರಣ ಕೊಡುವುದಿಲ್ಲ. ಮನೆಗೆ ಉಪಯೋಗವಾಗುವಂಥ ಯಾವುದಾದರೂ ಪದಾರ್ಥವನ್ನು ಕೊಡುತ್ತಾರೆ. ಪುರುಷರು ಅವರದೇ ಆದಂತ ಉಡುಗೆಗಳನ್ನು ಧರಿಸುತ್ತಾರೆ. ಇವರು ಮೀಸೆ ಬಿಡುವುದಿಲ್ಲ. ಮದುವೆಯ ನಂತರ ಗಡ್ಡ ಬೆಳೆಸುತ್ತಾರೆ. ಇವೆಲ್ಲ ತಮ್ಮ ಪ್ರತ್ಯೇಕತೆ ಹಾಗೂ ನಮ್ರತೆಗಳನ್ನು ಸೂಚಿಸುವುವೆಂದು ತಮ್ಮ ನಂಬಿಕೆಗಳನ್ನು ಪ್ರತಿನಿಧಿಸುತ್ತವೆಂದು ತಿಳಿಯುತ್ತಾರೆ. ಮದುವೆಗೆ ಸಹ ಇವರವೇ ಆದ ವಿಧಿ ವಿಧಾನಗಳಿವೆ. ಆಮಿಶ್ ಜನರನ್ನು ಅವರ ಜೀವನ ವಿಧಾನವನ್ನು ನೋಡಿದಾಗ ಆಶ್ಚರ್ಯವಾಗುತ್ತದೆ. ಬೇರೆ ಬೇರೆ ದೇಶಗಳಿಂದ ಬಂದ ಜನರು ಅಮೆರಿಕಾದಲ್ಲಿರುವ ವಿದ್ಯಾಭ್ಯಾಸ, ಉದ್ಯೋಗ ಮತ್ತಿತರ ಅವಕಾಶಗಳನ್ನು ಉಪಯೋಗಿಸಿಕೊಳ್ಳುವುದರೊಂದಿಗೆ ಅಲ್ಲಿಯ ಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗುತ್ತಿರುವಾಗ, ಹಲವು ಪೀಳಿಗೆಗಳಿಂದ ಅಲ್ಲೇ ಇರುವ ಆಮಿಶ್ ಜನರು ಅವರ ಅಸ್ತಿತ್ವವನ್ನು ಉಳಿಸಿಕೊಳ್ಳುವ ನಿರ್ಧಾರದಲ್ಲಿ ಅವರದೇ ಆದ ರೀತಿಯಲ್ಲಿ ಜೀವನ ನಡೆಸುತ್ತಿರುವುದೊಂದು ಸೋಜಿಗ. ಪರಸ್ಪರ ಪ್ರೀತಿ ವಿಶ್ವಾಸದಿಂದ, ಹೆಚ್ಚು ಆಸೆಗಳಿಲ್ಲದೆ ಸಂಯಮದಿಂದ ಅವರದೇ ಆದ ನಂಬಿಕೆಗಳಿಗೆ ಬದ್ಧರಾಗಿ ಬದುಕುತ್ತಿದ್ದಾರೆ.

***

ಜಹಳ ಓಂದೆ ಮಹಾರಾಜರ ಕಾಲದಲ್ಲಿ ಮೈಸೂರಿನಲ್ಲಿ ದಸರಾ ವಸ್ತು ಪ್ರದರ್ಶನ

ಅದ್ದೂರಿಯಿಂದ ನಡೆಯುತ್ತಿದ್ದಿತಷ್ಟೆ. ಅಲ್ಲಿ ಕೆಲವು ಅರಗಿನ ಬೊಂಬೆಗಳನ್ನಿಟ್ಟಿರುತ್ತಿದ್ದರು. ಅವನ್ನು ನೋಡಲು ಪ್ರತ್ಯೇಕ ಟಿಕೇಟು ಕೊಳ್ಳಬೇಕಾಗಿತ್ತು. ಒಂದು ಕೋಣೆಯಲ್ಲಿ ದೊಡ್ಡದಾದ ಜೀವಂತ ಮನುಷ್ಯರಿಗಿಂತ ಎತ್ತರವಾದ ಸರಸ್ವತಿಯ ವಿಗ್ರಹ. ಕೈಯಲ್ಲಿ ವೀಣೆ. ಕೋಣೆಯಲ್ಲಿ ಸಾಕಷ್ಟು ಜನ ಸೇರಿದ ಕೂಡಲೆ ಸರಸ್ವತಿ, ವೀಣೆ ನುಡಿಸಲು ಪ್ರಾರಂಭಿಸುತ್ತಿದ್ದಳು. ವೀಣೆಯ ಮನೆಗಳ ಮೇಲೆ ಬೆರಳುಗಳು ಸುಲಲಿತವಾಗಿ ಆಡುತ್ತಿದ್ದವು. ಮೂರು ನಿಮಿಷದ ಹಾಡು ಮುಗಿದ ಕೂಡಲೆ ನಾವು ಈಚೆ ಬರುತ್ತಿದ್ದೆವು. ಬೊಂಬೆಯ ಹಿಂದೆ ಯಾರಿಗೂ ಕಾಣದಂತೆ ಅಡಗಿಸಿಟ್ಟ ಗ್ರಾಮೋಫೋನಿನಲ್ಲಿ ವೀಣೆಯ ರೆಕಾರ್ಡನ್ನು ಹಾಕಿರುತ್ತಿದ್ದರು. ಇಂತಹ ಇನ್ನೂ ಕೆಲವು ಬೊಂಬೆಗಳು ಇದ್ದವು. ಈಗ ಇದೇಕೆ ನೆನಪಿಗೆ ಬಂತು ಎನ್ನುತ್ತೀರ? ಕಾರಣವಿದೆ.

ಹಾದಿಯಲ್ಲಿ ನಾವು ಲಾಂಕಾಸ್ಟರ್ ಕೌಂಟಿ ಹೆರಿಟೇಜ್ ವ್ಯಾಕ್ಸ್ ಮ್ಯೂಸಿಯಂ ಅನ್ನು ನೋಡಲು ನಿಂತೆವು. ಇಲ್ಲಿ ಅರಗಿನ ಬೊಂಬೆಗಳು ನಿಜವಾಗಿಯೂ ಜೀವಂತವಾಗಿರುವಂತೆ ತೋರುತ್ತವೆ. ರೆಡ್ಇಂಡಿಯನ್ ಹಳ್ಳಿಗಳಿಂದ ಹಿಡಿದು ಅತ್ಯಾಧುನಿಕ ನಗರ ಜೀವನದ ವರೆಗೆ ವಿವಿಧ ರೀತಿಯಲ್ಲಿ ವಿವಿಧ ಹಂತಗಳಲ್ಲಿ ತೆರೆದಿಟ್ಟು ತೋರುವ ದೃಶ್ಯಗಳಿವೆ. ಕತ್ತಲೆ-ಬೆಳಕಿನ ಆಟ, ನೈಜವೆನಿಸುವ ಗಿಡ-ಬಳ್ಳಿ, ಪ್ರಾಣಿ, ಬೆಂಕಿ ಅಲ್ಲದೆ ಶಬ್ದ ಸಂಯೋಜನೆಗಳಿಂದಾಗಿ ನಾವು ಬೇರೆಯೇ ಆದ ವಾತಾವರಣದಲ್ಲಿರುತ್ತೇವೆ. ವಿಲಿಯಂ ಪೆನ್, ಬೆಂಜಮಿನ್ ಫ್ರಾಂಕ್‌ಲಿನ್, ಡೇನಿಯಲ್ ಬೂನ್, ಜಾರ್ಜ್ ವಾಷಿಂಗ್‌ಟನ್, ಏಬ್ರಹಾಂ ಲಿಂಕನ್ ಮತ್ತಿತರ ಪ್ರತಿರೂಪಗಳು ನಮ್ಮ ಕಣ್ಣ ಮುಂದೆ ನಿಲ್ಲುತ್ತವೆ. ಜೀವಂತವಾದುದೆಂಬಂತೆ ಕಾಣುವ ಬೊಂಬೆಗಳು, ದೃಶ್ಯಗಳು, ಚಲನೆ, ಧ್ವನಿ ಸಂಯೋಜನೆ ಇವೆಲ್ಲದರ ಒಟ್ಟು ಪರಿಣಾಮ ಅದ್ಭುತವಾಗಿದೆ. ಚರಿತ್ರೆಯನ್ನು ಜನಪದ ಕಥೆಗಳನ್ನು ಮನದಟ್ಟಾಗುವಂತೆ ತಿಳಿಸಲು ಇದೊಂದು ಒಳ್ಳೆಯ ಮಾಧ್ಯಮವಾಗಬಲ್ಲದು ಎನಿಸಿತು.

***

ಈ ದೇಶದ ದೂರದರ್ಶನದ ಕಾರ್ಯಕ್ರಮಗಳಿಗೆ ಹೊಂದಿಕೊಳ್ಳಲು ನಮಗೆ ಸ್ವಲ್ಪ ಸಮಯ ಬೇಕಾಯಿತು. ಬೆಳಗಿನ ವಾರ್ತೆಗಳನ್ನಂತೂ ತಪ್ಪದೆ ನೋಡುತ್ತಿದ್ದೆವು. ದಿನಕಳೆದಂತೆ ಹಲವಾರು ಕಾರ್ಯಕ್ರಮಗಳು ತುಂಬಾ ಸ್ವಾರಸ್ಯಪೂರ್ಣವಾಗಿರುವುದನ್ನು ಗಮನಿಸಿದೆವು. ಸಂಜೆ ಏಳು ಗಂಟೆಗೆ ಜೆಪರ್ಡಿ ಎಂಬ ಕಾರ್ಯಕ್ರಮವಿರುತ್ತದೆ. ಇದೊಂದು ಉತ್ತಮ ಮಟ್ಟದ ರಸಪ್ರಶ್ನೆ ಕಾರ್ಯಕ್ರಮ. ಬೇರೆ ಬೇರೆ ಕ್ಷೇತ್ರಗಳಲ್ಲಿರುವವರು ಎಂದರೆ ವಕೀಲರು, ವೈದ್ಯರು, ಬರಹಗಾರರು, ವಿದ್ಯಾರ್ಥಿಗಳು ಎಲ್ಲರೂ ಇದರಲ್ಲಿ ಭಾಗವಹಿಸುತ್ತಾರೆ. ಚರಿತ್ರೆ, ಭೂಗೋಳ, ರಾಜಕೀಯ, ಸಾಹಿತ್ಯ, ಸಂಗೀತ ಹೀಗೆ ಎಲ್ಲ ವಿಷಯಗಳನ್ನು ಕುರಿತಂತೆ ಪ್ರಶ್ನೆಗಳಿರುತ್ತವೆ. ಭಾರತವನ್ನು ಕುರಿತಂತೆಯೂ ಸಾಕಷ್ಟು ಪ್ರಶ್ನೆಗಳಿರುವುದು ನಮಗೆ ತೃಪ್ತಿಯ ವಿಷಯ! ಭಾಗವಹಿಸುವವರೊಂದಿಗೆ ವೀಕ್ಷಕರು ಉತ್ತರಿಸುತ್ತ ಮನರಂಜನೆ ಪಡೆಯುವುದರೊಂದಿಗೆ ಸಾಮಾನ್ಯ ಜ್ಞಾನವನ್ನು ಹೆಚ್ಚಿಸಿಕೊಳ್ಳಬಹುದಾದಂತ ಉತ್ತಮ ಕಾರ್ಯಕ್ರಮ. ಪ್ರತಿದಿನ ೧೧ಗಂಟೆಗೆ ವಿ [illegible] ಎಂಬ [illegible] ಬರುತ್ತದೆ. [illegible]

ಒಂದು ಚಿಕ್ಕ ಹಳ್ಳಿಯಿಂದ ತನ್ನ ಕಸಿನ್‌ನನ್ನು ಹುಡುಕಿಕೊಂಡು ಚಿಕಾಗೋಗೆ ಬಂದಿರುವ ಸರಳ ಸ್ವಭಾವದ ಯುವಕನ ಕಥೆ. ಇದರಲ್ಲಿ ಸಹಜ ಸುಂದರ ಹಾಸ್ಯ, ಶುದ್ಧ ಮನರಂಜನೆಯನ್ನು ನೀಡುತ್ತವೆ. ಸಂಜೆ ಬರುವ ಕಾಸ್ಬಿ ಶೋ ತುಂಬ ಜನಪ್ರಿಯವಾಗಿದೆ. ಅಮೆರಿಕಾದ ಜನತೆ ತಮ್ಮ ಅತ್ಯಂತ ಮೆಚ್ಚಿನ ವ್ಯಕ್ತಿಯೆಂದು ಹೇಳಿರುವ ಬಿಲ್‌ಕಾಸ್ಬಿ, ದೇಶದ ಲಕ್ಷಾಂತರ ಮನೆಗಳನ್ನು ಮನಗಳನ್ನು ಕಾಸ್ಬಿ ಶೋ ಮೂಲಕ ಪ್ರವೇಶಿಸುತ್ತಾರೆ. ಈತನಿಗೆ ಜನ ನೀಡುವ ಗೌರವ, ಆತ ಒಳ್ಳೆಯ ನಟ ಮತ್ತು ನಿರ್ದೇಶಕ ಎನ್ನುವುದಕ್ಕೆ ಮಾತ್ರವಲ್ಲ. ಈತನ Fatherhood ಎಂಬ ಪುಸ್ತಕವು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಮಾರಾಟವಾದುದಲ್ಲದೆ America's Best Father ಎಂಬ ಹೆಸರನ್ನು ಗಳಿಸಿಕೊಟ್ಟಿತ್ತು. ಒಂದು ವರ್ಷದ ಹಿಂದೆ ಈತ ಜಾರ್ಜಿಯಾದಲ್ಲಿರುವ ಒಂದು ಮಹಿಳಾ ಕಾಲೇಜಿಗೆ ೨೦ ಮಿಲಿಯನ್ ಡಾಲರ್‌ಗಳನ್ನು ನೀಡಿದನು. ಕಾಸ್ಬಿಯು ನಡೆಸುವ ಟಿ.ವಿ. ಶೋಗಳಲ್ಲಿ ಬಹುಪಾಲು ಪ್ರಪಂಚದ ಯಾವುದೇ ಭಾಗದಲ್ಲಿ ಮಧ್ಯಮ ವರ್ಗದ ಸಂಸಾರಗಳಲ್ಲಿ ನಡೆಯಬಹುದಾದಂತವೇ ಆಗಿರುತ್ತವೆ. ಜನ ಇವನ್ನು ತುಂಬಾ ಆಸಕ್ತಿಯಿಂದ ನೋಡುತ್ತಾರೆ. ಮಧ್ಯಾಹ್ನದಲ್ಲಿ ಬರುವ ಒಂದು ಕುತೂಹಲಕಾರಿ ಕಾರ್ಯಕ್ರಮ ಓಪ್ರಾವಿನ್‌ಫ್ರೆಶೋ ಪ್ರಚಲಿತ ವಿಷಯಗಳನ್ನು ಕುರಿತಂತೆ ಚರ್ಚೆಗಳು ಇವರ ಜೀವಾಳ. ಜೊತೆಗೆ ಖ್ಯಾತ ಚಲನಚಿತ್ರ ತಾರೆಯರು, ಟಿ.ವಿ. ಧಾರಾವಾಹಿಗಳ ಮೂಲಕ ಜನಪ್ರಿಯರಾಗಿರುವ ನಟನಟಿಯರು, ಕ್ರೀಡಾಪಟುಗಳು ಮುಂತಾದವರನ್ನು ಕರೆದು ಪರಿಚಯ ಮಾಡಿಸುವುದುಂಟು. ಹೊಸದಾಗಿ ಪ್ರಕಟವಾದ ಪುಸ್ತಕಗಳನ್ನು ಕುರಿತು ಚರ್ಚೆಗಳಾಗುತ್ತವೆ. ವಿಶೇಷವೆಂದರೆ ಕೃತಿಯನ್ನು ರಚಿಸಿದ ಸಾಹಿತಿ ಮತ್ತು ಕೆಲವು ಓದುಗರು ಉಪಸ್ಥಿತರಿರುತ್ತಾರೆ. ಇದೊಂದು ಬಹಳ ಒಳ್ಳೆಯ ಕಾರ್ಯಕ್ರಮ. ಬಿಲ್ ಕಾಸ್ಬಿ ಓಪ್ರಾವಿನ್‌ಫ್ರೆ ಮುಂತಾದವರನ್ನು ನೋಡುವಾಗ ೧೯೬೩ ಆಗಸ್ಟ್ ೨೮ರಂದು ಮಾರ್ಟಿನ್ ಲೂಥರ್ ಕಿಂಗ್ ಜೂನಿಯರನು ವಾಷಿಂಗ್‌ಟನ್‌ನ ಲಿಂಕನ್ ಸ್ಮಾರಕ ಭವನದಲ್ಲಿ ಭಾಷಣ ಮಾಡುತ್ತ ಹೇಳಿದ ಈ ಪ್ರಸಿದ್ಧವಾದ ನುಡಿಗಳು ನೆನಪಿಗೆ ಬರುತ್ತವೆ. ನನಗೊಂದು ಕನಸಿದೆ. ಒಂದು ದಿನ ಈ ಕೆಂಪು ಗುಡ್ಡದ ಮೇಲೆ ಇಂದಿನ ಜೀತದಾಳುಗಳ ಮಕ್ಕಳು, ಜೀತದಾಳುಗಳ ಮಾಲೀಕರ ಮಕ್ಕಳು, ಒಡಹುಟ್ಟಿದವರಂತೆ ಒಟ್ಟಿಗೆ ಕೂರಬೇಕು. ನನ್ನ ನಾಲ್ಕು ಪುಟ್ಟ ಮಕ್ಕಳು ವಾಸ ಮಾಡುವ ನಾಡಿನಲ್ಲಿ ಮನುಷ್ಯನ ಯೋಗ್ಯತೆಯನ್ನು ನಿರ್ಧರಿಸುವುದು ಅವನ ಗುಣ, ವಿದ್ಯೆಗಳಾಗಬೇಕೆ ಹೊರತು ಅವನ ಬಣ್ಣವಾಗಬಾರದು ಎಂದು. ಇತ್ತೀಚೆಗೆ ಎಂದರೆ ೧೯೮೯ ವರ್ಷಾಂತ್ಯದಲ್ಲಿ ಅಮೆರಿಕಾದ ಪತ್ರಿಕೆಯೊಂದು ನಡೆಸಿದ ಸಮೀಕ್ಷೆಯ ಪ್ರಕಾರ ದೇಶದಲ್ಲಿ ಅತ್ಯಂತ ಹೆಚ್ಚಿನ ಸಂಭಾವನೆಯನ್ನು ಪಡೆಯುವ ಹತ್ತು ಮಂದಿಯಲ್ಲಿ ಐವರು ಕಪ್ಪು ಮಂದಿ ಇದ್ದಾರೆ. ಮೈಕೆಲ್ ಜಾಕ್ಸನ್. ಬಿಲ್ ಕಾಸ್ಬಿ, ಮೈಕ್ ಟೈಸನ್, ಎಡ್ಡಿಮರ್ಫಿ ಮತ್ತು ಓಪ್ರಾವಿನ್‌ಫ್ರೆ.

ಪ್ರತೀ ಶನಿವಾರ ಬೆಳಿಗ್ಗೆ ಭಾರತೀಯ ಕಾರ್ಯಕ್ರಮಗಳು ಪ್ರಸಾರವಾಗುತ್ತವೆ (ಇದು ಒಂದೊಂದು ರಾಜ್ಯದಲ್ಲಿ ಒಂದೊಂದು ರೀತಿ ಇರುತ್ತದೆ). ನಾವು ನೋಡಿದ ಹೊಸದರಲ್ಲಿ ಚಿತ್ತರಗೊಂಡ ಕಾರ್ಯಕ್ರಮ ಕರ್ನಾಟಕದ ಶಿಲ್ಪಕಲೆಯನ್ನು ಕುರಿತದ್ದು. ವರದಿ ಒಂದಿನಲ್ಲಿದ್ದರು ಧ್ವನಿ ಪರಿಚಿತವಾದದ್ದು. ಬೆಂಗಳೂರು ದೂರದರ್ಶನದವರದ್ದು. (ಮುಂದುವರಿಯುವುದು)

# ಜಾತಿ–ಅಂತರ್ಜಾತಿ ವಿವಾಹ ವೇದಿಕೆ



## ನನಗೆ ರಿಜಿಸ್ಟರ್ಡ್ ಮ್ಯಾರೇಜ್ ಇಷ್ಟ

ನನಗೆ ಇಷ್ಟವಾದ ಮದುವೆ ಎಂದರೆ ರಿಜಿಸ್ಟರ್ ಮ್ಯಾರೇಜ್. ಸದ್ದುಗದ್ದಲವಿಲ್ಲದೆ ವೃಥಾ ಧನ ಹಾನಿ ಇಲ್ಲದೆ ಸರಳವಾಗಿ ಕಾನೂನಿನ ಪ್ರಕಾರವಾಗಿ ವಿವಾಹವಾಗುವುದೆಂದರೆ ಬಹಳ ಪ್ರಿಯ. ಅದರಲ್ಲೂ ಅಂತರ್ಜಾತಿಯ ವಿವಾಹ ಹಿರಿಯರ ಅನುಮತಿ ಪಡೆದು ನೋಂದಣಿ ಕಛೇರಿಯಲ್ಲಿ ನನ್ನ ಮದುವೆ ದಾಖಲಾಗುವುದು ಇಷ್ಟ. ಏಕೆಂದರೆ ಹಿಂದೂ ವಿವಾಹ ವಿಶೇಷ ಕಾಯ್ದೆಯ ಪ್ರಕಾರ ವಿವಾಹವನ್ನು ದಾಖಲು ಮಾಡುವುದರಿಂದ ಜೀವನಕ್ಕೆ ಒಂದು ಭದ್ರತೆ ಲಭಿಸಿದಂತಾಗುತ್ತದೆ.

ಮುಂದಿನ ಜೀವನದಲ್ಲಿ ತೊಂದರೆಯಾದ ಪಕ್ಷದಲ್ಲಿ ಕಾನೂನಾತ್ಮಕವಾಗಿ ನಾವು ಧೈರ್ಯದಿಂದ ಅದನ್ನು ಎದುರಿಸಬಹುದು. ಅಂತಜಾತಿ ವಿವಾಹಕ್ಕೆ ಸರ್ಕಾರ ಈ ಮೂಲಕ ಪ್ರೋತ್ಸಾಹ ನೀಡುತ್ತಿದೆ. ಕಾರಣವೆಂದರೆ ಎರಡು ಜಾತಿ, ಸಂಪ್ರದಾಯ, ವರ್ಗಗಳ ಮಿಲನವಾಗುತ್ತದೆ. ನಾವು ನಮ್ಮ ಜೀವನ ಸಂಗಾತಿಗಳ ಆಯ್ಕೆಯಲ್ಲಿ ಸರ್ಕಾರ ಸಂಪೂರ್ಣ ಸ್ವತಂತ್ರ ನೀಡಿದೆ. ಆದರೆ ಅದರ ಸಂಪೂರ್ಣ ಸದ್ಬಳಕೆಯಾದಲ್ಲಿ ದೇಶವು ಪ್ರಗತಿ ಪಥದತ್ತ ಸಾಗುತ್ತದೆ. ಈ ರೀತಿಯ ವಿವಾಹದಿಂದ ವರದಕ್ಷಿಣೆ ಪಿಡುಗನ್ನೂ ಸಹ ತಡೆಗಟ್ಟಬಹುದು. ವಧುವರರಿಬ್ಬರು ನಿರ್ಧರಿಸಿದ ಪಕ್ಷದಲ್ಲಿ ಇಂತಹ ಸಾಮಾಜಿಕ ಪಿಡುಗುಗಳಿಗೆ ಪೂರ್ಣ ವಿರಾಮ ಹಾಕಬಹುದು ಮತ್ತು ಈ ವಿವಾಹದಲ್ಲಿ ವಧುವರರ ವಿವಾಹದ ವಯಸ್ಸನ್ನು ನಿಗದಿ ಪಡಿಸಿರುವುದರಿಂದ ಬಾಲ್ಯವಿವಾಹ, ಅನಿರ್ದಿಷ್ಟ ವಯಸ್ಸಿನ ವಿವಾಹಗಳನ್ನು ತಡೆಗಟ್ಟಬಹುದು. ಇಂದಿನ ಯುವಶಕ್ತಿ ಇಂಥ ವಿವಾಹ ಮಾಡಿಕೊಳ್ಳುವುದರಿಂದ ಸಾಮಾಜಿಕ ಪಿಡುಗನ್ನು ಸುಲಭವಾಗಿ ನಿಯಂತ್ರಿಸಬಹುದು. ಆದ್ದರಿಂದ ನನಗೆ ನೋಂದಣಿ ವಿವಾಹ ತುಂಬಾ ಇಷ್ಟ.



ರೂಪ, ಹಾಸನ ಜಿಲ್ಲೆ



## ಪೈಲೆಟ್ ಹೆಂಡತಿ ಈಗ ಭಿಕ್ಷುಕಿ!

ಬೀಬಿಜಾನ್ ಎಂಭತ್ತು ವರ್ಷದ ಕಟ್ಟುಮಸ್ತಾದ ಎತ್ತರದ ವೃದ್ಧೆ. ಈಕೆ ನಡೆದರೆ ಭೂಮಿ ಸ್ವಲ್ಪವಾದರೂ ಸದ್ದು ಮಾಡುತ್ತದೆ. ಈ ಇಳಿ ವಯಸ್ಸಿನಲ್ಲೂ ಒಂದಿಬ್ಬರು ಗಂಡಸರನ್ನು ಹೊಡೆಯುವಂತಹ ಸಾಹಸ ಈಕೆಯಲ್ಲಿದೆ. ಬೆಳ್ಳಗಿರುವ ಈಕೆಯ ಕಂಡವರು ಹಿಂದಿನ ಸೌಂದರ್ಯವನ್ನು ಕಲ್ಪಿಸಿಕೊಳ್ಳಬಹುದು. ಈಕೆ ಖಂಡಿತ ಬಾಂಗ್ಲಾದೇಶದವರೆಂದು ಭಾವಿಸಬಹುದು. ನನಗೆ ಈಕೆಯನ್ನು ನೋಡಿದ ತಕ್ಷಣ ಶೇಕ್ ಹಸೀನಾ ಬೇಗಂ ಖಲಿದಾಜಿಯ ನೆನಪಾದರು. ಈಕೆ ಬಾಂಗ್ಲಾದೇಶದವಳಂತೆ ಕಂಡರೂ ಹುಟ್ಟಿ ಬೆಳೆದದ್ದು ಬೆಂಗಳೂರಿನ ಕಾಡುಗೋಡಿಯಲ್ಲಿ. ಬೀಬಿಜಾನ್‌ಗೆ ಒಂದು ಡಜನ್ ಮಕ್ಕಳು. ಐದು ಜನ ಸತ್ತು ಈಗ ಏಳು ಜನ ಉಳಿದುಕೊಂಡಿದ್ದಾರೆ. ಇಷ್ಟು ಜನ ಮಕ್ಕಳನ್ನು ಹಡೆದು ಸಾಕಿ ಇಂದಿಗೂ ದೇಹದಾರ್ಢ್ಯ ಉಳಿಸಿಕೊಂಡಿರುವುದು ಎಲ್ಲರನ್ನೂ ದಂಗು ಬಡಿಸುತ್ತದೆ. ಈಕೆ ಮಕ್ಕಳ ಹೆಸರು ಮರೆತು ಹೇಳಲು ತಡವರಿಸಿವಳು. ದೊಡ್ಡ ಮಗ ಮೆಹಬೂಬ್ ಸಾಬ್‌ಗೆ ೧೧ಜನ ಮಕ್ಕಳು. ಮಗಳು ನಜೀಮಾಗೆ ಎಂಟು ಜನ ಮಕ್ಕಳು. ಜೀನತ್‌ಗೆ ಎಂಟು ಜನ ಮಕ್ಕಳು. ಹೀಗೆ ಮೊಮ್ಮಕ್ಕಳಿಗೆ ಆಗುತ್ತಿರುವ ಮರಿಮೊಮ್ಮಕ್ಕಳ ಬಗ್ಗೆ ಹೇಳುತ್ತಲೇ ಇದ್ದಳು. ಅಂತೂ ಸಂತಾನದ ಕೊಂಡಿ ಬೆಳೆಯುತ್ತಲೇ ಇದೆ. ಕೊನೆಯ ಮಗಳು ಸಿಂಗಾಪೂರ್‌ನಲ್ಲಿದ್ದಾಳಂತೆ. ೭ ಸಮುದ್ರದಾಚೆ ಎಂಬುದು ಈಕೆಯ ಉವಾಚ. ಕೊನೆಯ ಮಗನಿಗೆ ತುಟಿ ಸೀಳಿರುವುದರಿಂದ ಸರಿಯಾಗಿ ಮಾತನಾಡಲು ಬರುವುದಿಲ್ಲ. ಪಿಟೀಲು ಮಾಡಿ ಅದನ್ನೇ ತನ್ನ ಜೀವನೋಪಾಯಕ್ಕೆ ಬಳಸುತ್ತಿದ್ದಾನೆ.



ಬೀಬಿಜಾನ್ ಪೈಲೆಟ್ಟನ (ಮೊಹಮದ್ ಖಾನ್) ಹೆಂಡತಿಯಂತೆ. ಸಿಂಗಾಪೂರ್‌ನಲ್ಲಿ ಪೈಲೆಟ್ ಆಗಿದ್ದನಂತೆ. ಈಕೆಯ ಅಂದ ನೋಡಿ ಮದುವೆಯಾದ. ಕ್ಯಾನ್ಸರ್‌ನಿಂದ ಐವತ್ತು ವರ್ಷದ ಹಿಂದೆ ಸತ್ತು ಹೋದ. ಒಂದು ಕಾಲಕ್ಕೆ ಕಾಡುಗೋಡಿಯಲ್ಲಿ ಶ್ರೀಮಂತರಾಗಿ ಬದುಕಿದ ಬೀಬಿಜಾನ್ ಈಗ ಭಿಕ್ಷೆ ಬೇಡುತ್ತಿದ್ದಾಳೆ. ಈಕೆಯ ಭಾವ ಮೋಸ ಮಾಡಿ ಇದ್ದಬದ್ದ ಆಸ್ತಿಯನ್ನೆಲ್ಲ ಸೂರೆ ಮಾಡಿದ. ಅವನು ಒಂದು ದಿವಸ ಸಿಂಗಾಪೂರ್‌ನಲ್ಲೇ ಮರಣ ಹೊಂದಿದ. ಈಕೆಯ ನೆಂಟರಿಷ್ಟರು ಈಗಲೂ ಸಿಂಗಾಪೂರ್, ಪಿನಾಂಗ್ ಮುಂತಾದ ಕಡೆ ವಾಸವಾಗಿದ್ದಾರೆ. ಮುಸ್ಲಿಮರಾದರೂ ಹಾವಾಡಿಸುವುದು ಇವರ ವೃತ್ತಿ. ಇವರ ಮೊಮ್ಮಕ್ಕಳೆಲ್ಲ ಹಾವಾಡಿಗರು. ಬೀಬಿಜಾನ್ ಯಾರ ಮೇಲೂ ಅವಲಂಬನೆಯಾಗಿಲ್ಲ. ಈಗಲೂ ಆರ್. ಟಿ. ನಗರ, ಶಿವಾಜಿನಗರಕ್ಕೆ ಭಿಕ್ಷೆ ಬೇಡಲು ಹೋಗುತ್ತಾಳೆ. ದಿನಕ್ಕೆ ಮೂವತ್ತರಿಂದ, ನಲವತ್ತು ರೂ. ದೊರಕುತ್ತದೆ. ಬರುವಾಗ ಅರ್ಧ ಕ್ವಾಟರ್ ಬ್ರಾಂದಿ ತರುತ್ತಾಳೆ. ತನ್ನೆಲ್ಲಾ ನೋವನ್ನು ಮರೆಯಲು ಕುಡಿಯುತ್ತಾಳೆ. ನನ್ನ ಗಂಡ ಸತ್ತಾಗ ಎಲ್ಲಾ ಚಿಕ್ಕಚಿಕ್ಕ ಮಕ್ಕಳು. ಆಸ್ತಿ ಕೊಡದೆ ಮೋಸ ಮಾಡಿದರು. ನಾನಿದ್ದ ಚಂದಕ್ಕೆ ಎಲ್ಲಾ ಗಂಡಸರು ನನ್ನನ್ನು ಬಯಸಿದರು. ಆದರೆ ನಾನು ಯಾರಿಗೂ ಅವಕಾಶ ಮಾಡಿಕೊಡಲಿಲ್ಲ. ಭಿಕ್ಷೆ ಬೇಡಿ ತಂದು ಮಕ್ಕಳನ್ನು ಸಾಕಿ ಅದರಲ್ಲೇ ನಾಲ್ಕು ಕಾಸು ಕೂಡಿಟ್ಟು ನನ್ನ ಐದು ಜನ ಹೆಣ್ಣು ಮಕ್ಕಳಿಗೆ ಮದುವೆ ಮಾಡಿದೆ ಎನ್ನುತ್ತಾಳೆ. ತಾನು ಪಟ್ಟ ಕಷ್ಟವನ್ನು ನೆನಪಿಸಿಕೊಂಡು ಕಣ್ಣು ಕೆಂಪಗಾಗಿದ್ದವು. ದುಃಖ ತಡೆಯಲಾರದೆ ಕಣ್ಣೀರು ಸುರಿಸಿದಳು. ನಂದು ಸೀತೆ ವನವಾಸ ಕಣಪ್ಪ ಅಂದಳು. ಹಾವಾಡಿಗರ ಸ್ಲಂನಲ್ಲಿ ವಾಸವಿರುವ ಈಕೆಯದು ತುಂಬಾ ಕಷ್ಟದ ಜೀವನ.

**–ಕೆ. ಶಾಂತಕುಮಾರಿ**



## ಬಹುಮುಖ ಪ್ರತಿಭಾವಂತೆ ಕಮಲಾ ಜೈನ್

ಮೈಸೂರಿನ ಮಹಾರಾಜ ಸಂಸ್ಕೃತ ಕಾಲೇಜಿನಲ್ಲಿ ಕಳೆದ ೧೫ ವರ್ಷಗಳಿಂದ ಜೈನಾಗಮದ ಪ್ರಾಧ್ಯಾಪಕಿಯೂ, ವಿಭಾಗದ ಮುಖ್ಯಸ್ಥೆಯೂ ಆಗಿ ಸೇವೆ ಸಲ್ಲಿಸುತ್ತಿರುವ ಎಸ್.ಪಿ. ಕಮಲಾ ಜೈನ್ ಬಹುಮುಖ ಪ್ರತಿಭಾವಂತೆ. ಬೆಂಗಳೂರಿನ ಎಸ್.ಪಿ. ಅನಂತರಾಜ ಶಾಸ್ತ್ರಿ ಮತ್ತು ವಿದೂಷಿ ಎಸ್.ಬಿ. ವಸಂತಕುಮಾರಿಯವರ ಸುಪುತ್ರಿಯಾಗಿ ಜನಿಸಿದರು. ಕಮಲಾಜೈನ್ ಅವರ ಪತಿ ಆರ್.ಬಿ. ವೃಷಭರಾಜು ಅವರು ಮೈಸೂರಿನಲ್ಲಿ ಕಮರ್ಷಿಯಲ್ ಟ್ಯಾಕ್ಸ್ ಇನ್ಸ್‌ಪೆಕ್ಟರ್ ಆಗಿ ಸೇವೆ ಸಲ್ಲಿಸುತ್ತಿದ್ದಾರೆ. ಇವರ ಪುತ್ರಿ ಸಿ.ವಿ. ಅಪೂರ್ವ ಜೈನ್ ಉತ್ತಮ ಗಾಯಕಿ. ಹಲವು ಸ್ಪರ್ಧೆಗಳಲ್ಲಿ ಭಾಗವಹಿಸಿ ಬಹುಮಾನ ಪಡೆದಿದ್ದಾರೆ. ಕಮಲಾಜೈನ್ ಅವರು ಎಂ.ಎ. (ಸಂಸ್ಕೃತ), ಬಿ.ಎಡ್. ಪದವೀಧರೆ. ಜೈನಾಗಮ ಪ್ರವೀಣ, ಜೈನ ಸಿದ್ಧಾಂತ, ವಿದ್ವದುತ್ತಮ, ಹಿಂದಿ ರತ್ನದಲ್ಲಿ ವಿದ್ಯಾರ್ಹತೆ ಪಡೆದಿದ್ದಾರೆ.

ಇವರ ಹಲವಾರು ಕವನ, ಲೇಖನ, ಚುಟುಕು, ಭಕ್ತಿಗೀತೆಗಳು ಹಲವು ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಮೈಸೂರು ಜಿಲ್ಲೆಯ ಪಿರಿಯಾಪಟ್ಟಣ ಮನೆ ಮನೆ ಕವಿಗೋಷ್ಠಿ ಬಳಗದಿಂದ ಇವರಿಗೆ 'ಸಾಹಿತ್ಯ ರತ್ನ' ಪ್ರಶಸ್ತಿ, ಬಿರುದು ಸನ್ಮಾನ ಲಭಿಸಿದೆ. ಆಗಮತ್ರಯ ಮಂಡಳಿ ಕಾರ್ಯಕಾರಿ ಸಮಿತಿ ಸದಸ್ಯರಾಗಿ ಆರು ವರ್ಷಗಳಿಂದ ಸೇವೆ ಸಲ್ಲಿಸುತ್ತಿದ್ದಾರೆ.

ರಾಜ್ಯ ಮಟ್ಟದ ವಿದ್ವತ್‌ಗೋಷ್ಠಿಗಳಲ್ಲಿ ಸನ್ಮಾನ, ಆಗಮತ್ರಯ ಮಂಡಳಿ, ಮುಜರಾಯಿ ಇಲಾಖೆಯವರಿಂದ ಸನ್ಮಾನಿತರಾಗಿದ್ದಾರೆ. ಧರ್ಮಸ್ಥಳದ ವೀರೇಂದ್ರಹೆಗ್ಗಡೆಯವರಿಂದ ಪ್ರಶಸ್ತಿ, ಸನ್ಮಾನ ಲಭಿಸಿವೆ. ಹಲವು ಸಂಘ ಸಂಸ್ಥೆಗಳಿಂದ ಸನ್ಮಾನಕ್ಕೂ ಪಾತ್ರ. ಜೈನ್ ಮಿಲನ್ ಚಕ್ರೇಶ್ವರಿ ಮಹಿಳಾ ಸಮಾಜದಲ್ಲಿ ಸದಸ್ಯೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಪಿರಿಯಾಪಟ್ಟಣದ ವಾರಿದೀಪ ಪತ್ರಿಕೆ ಸಲಹೆಗಾರ್ತಿಯಾಗಿ ಸೇವೆ ಸಲ್ಲಿಸುತ್ತಿರುವ ಕಮಲಾಜೈನ್ ಉತ್ತಮ ವಾಗ್ಮಿ, ನೂರಾರು ಉಪನ್ಯಾಸಗಳನ್ನು ನೀಡಿ ಜನರ ತಿಳುವಳಿಕೆ ಮಟ್ಟವನ್ನು ಹೆಚ್ಚಿಸಿದ್ದಾರೆ. ಪ್ರತಿಭೆಯನ್ನು ಮೆರೆದಿದ್ದಾರೆ. ಬಹುಮುಖ ಪ್ರತಿಭಾವಂತೆ ಕಮಲಾಜೈನ್ ಸ್ನೇಹಜೀವಿ, ಜೈನಾಗಮನದಲ್ಲಿ ಪ್ರೊಫೆಸರ್ ಆಗಿದ್ದರೂ ಕೊಂಚವೂ ಪ್ರತಿಷ್ಠೆ ಇಲ್ಲ. ಸರಳ ನಡೆ, ನುಡಿ ಹಾಗೂ ಸದಾ ಮುಗುಳ್ನಗುವಿನಿಂದ ಆತ್ಮೀಯರೊಡನೆ ಬೆರೆಯುವ ಇವರು ಸಾಹಿತ್ಯ ಕ್ಷೇತ್ರದಲ್ಲಿ ಮತ್ತಷ್ಟು ಸಾಧನೆ ಮಾಡಿ ಕೀರ್ತಿ ಗಳಿಸಲಿ ಎಂದು ಹಾರೈಸೋಣ.

–ಬಿ. ಬಸವರಾಜು

---

ನಿಮ್ಮನ್ನು ನೀವು ಜಯಿಸಿ, ಆಗ ಇಡೀ ಜಗತ್ತೇ ನಿಮ್ಮದಾಗುತ್ತದೆ

–ವಿವೇಕಾನಂದ

## ಬಾ ನಲ್ಲೆ ಮಧುಚಂದ್ರಕೆ

ಕಲಾವಿದರು : ಕೆ. ಶಿವರಾಂ ಮತ್ತು ಸಂಗಡಿಗರು
ಗಾಯಕರು : ರಾಜೇಶ್ ಮತ್ತು ಸಂಗಡಿಗರು

ಆ ಬೆಟ್ಟದಲಿ
ಬೆಳದಿಂಗಳಲಿ
ಸುಳಿದಾಡಬೇಡ ಗೆಳತಿ
ಚೆಲುವಾದ ನಿನ್ನ
ಮಲ್ಲಿಗೆಯ ಮೈಯ
ಸುಟ್ಟಾವೋ ಬೆಳ್ಳಿ ಕಿರಣ ।

ಇಳಿಜಾರಿನಲಿ
ಆ ಕಣಿವೆಯಲಿ
ನೀ ಇಳಿಯ ಬೇಡ ಗೆಳತಿ
ತತ್ತರಿಸುವಂತೆ
ಕಾಲಲ್ಲಿ ಕಮರ
ಮುತ್ತುವವು ಮೊಲದ ಹಿಂಡು ।

ಈ ನನ್ನ ಎದೆಯ
ಹೂದೋಟದಲಿ
ನೀನೆತ್ತ ಪ್ರೀತಿ ಬಳ್ಳಿ
ಫಲ ಕೊಟ್ಟಿತೇನೆ
ಹೂ ಬಿಟ್ಟಿತೇನೆ
ಉಲ್ಲಾಸವನು ಚೆಲ್ಲಿ ।

ಈ ಊರ ಬನಕೆ
ಚೆಲುವಾದ ಒಂಟಿ
ಹೂವಾಗಿ ಅರಳಿ ನೀನು
ಮರೆಯಾಗಬೇಡ
ಮಕರಂದವಿಂದ
ದುಂಬಿಗಳ ದಾಳಿಯಲಿ ।

-ಡಾ।। ಸಿದ್ಧಲಿಂಗಯ್ಯ

## ಸೋತು ಬಂದ ಗೆಳೆಯನಿಗೆ

ಸೋತೆನೆಂದು ಹತಾಶನಾಗ ಬೇಡ
ಗೆಲ್ಲುವೆನೆಂಬ ಭರವಸೆಯ ಇಡು
ಇಂದು ನಿನ್ನದಲ್ಲ ಎಂದು ಅರಿ
ನಾಳೆ ನನ್ನದೆಂದು ತಿಳಿ

ಜೀವನ ಆಶಾಭಾವನೆಗಳ ಸಾಗರ
ಸೋಲುಂಡದ್ದಕ್ಕೇಕೆ ಬೇಸರ?
ಸೋಲೆ ಗೆಲುವಿನ ಸೋಪಾನ
ಮುಂದೆ ದುಡುಕದೆ ನಡೆ ಜೋಪಾನ

ಅಂಬೆಗಾಲಿಡುವ ಮಗು ಎದ್ದುಬಿದ್ದಲ್ಲವೆ
ಕಲಿತದ್ದು ನಡಿಗೆ?
ಜೀವನ ಗುರಿಯೆಡೆಗೆ ಮುಖಮಾಡಿ
ಸಾಗಲಿಲ್ಲವೆ ಕೊನೆಗೆ?

ಮೊದಲ ಬಾರಿ ಸೀರೆಯುಟ್ಟ ನಾರಿ
ಬಿದ್ದಿರಲಿಲ್ಲವೆ ಜಾರಿ?
ತದನಂತರ ಮಂದಹಾಸ ಬೀರಿ
ಹಿಡಿಯಲಿಲ್ಲವೆ ಸೌಂದರ್ಯದ ದಾರಿ?

ಸೈಕಲ್ ಸವಾರ ಮಾಡಿಕೊಂಡಿರಲಿಲ್ಲವೆ
ನೋವ ಮಂಡಿಗೆ?
ಗೆದ್ದು ಬಂದನಲ್ಲವೆ ಜಯಭೇರಿ
ಬಾರಿಸಿ ಕೊನೆಗೆ?

ಕಹಿ ಉಂಡ ಮೇಲೆ ತಾನೆ
ಸಿಹಿ ರುಚಿ ತಿಳಿಯುವುದು?
ಸೋಲು ಗೆಲುವು ಕಂಡಾಗ ತಾನೆ
ಸುಖ ಸಮಾಧಾನ ಸಿಕ್ಕಿ
ಜೀವನ ಸಾರ್ಥಕ ಎನಿಸುವುದು!

-ವೀರೇಶ್.ಎಸ್.ಹಿರೇಮಳಲಿ

## ತಾಯಿ–ಕಂದ

ದಾಸವಾಳ ಹೂವು ಎಷ್ಟು ಚೆಂದ
ಹರಿಬ್ಯಾಡ ನನ ಕಂದ।
ಗಂಧ ನನ್ನ ಹಣೆಗೆ ಚೆಂದ
ಹಾಲು ಚಂದಿರನಕ್ಕಿಂತ ಚೆಂದ
ಕುಡಿಯೋ ನನ ಕಂದ।
ನನ್ನ ಪತಿ ನನಕ್ಕಿಂತ ಚೆಂದ
ಈಗ ಶಿವನ ಪಾದ ಸೇರ್ಯಾನೋ ನನ ಕಂದ।
ನಿನ್ನ ತುಂಟತನ ಎಷ್ಟು ಚೆಂದ
ನನಗೆ ತುಳಿದು ಹೋಗಬ್ಯಾಡ ನನಕಂದ।
ಅಪ್ಪನ ಮುಖವಾಡ ನಿನಗೆಷ್ಟು ಚೆಂದ
ಅಪ್ಪನ ನೆನಪ್ಯಾಕೋ ನೀ ನನ ಸ್ಕಂದ।
ಸೂರ್ಯನಕ್ಕಿಂತ ದೀಪ ಎಷ್ಟು ಚೆಂದ
ಆ ದೀಪ ನೀನೆ ನನ ಕಂದ।
ಈ ಪ್ರಪಂಚದೊಳಗೆ ಏನಿದೆ ಚೆಂದ
ನನಗೆ ನೀನೆ ಚೆಂದ ನನಕಂದ।

**–ಶಶಿಕಲಾ ಎಸ್. ವೋದೆ**
ತೇಲಾಕುಣಿ

## ಬೆಳದಿಂಗಳ ರಾತ್ರಿ

ಆ ಬೆಳದಿಂಗಳ ರಾತ್ರಿ
ಅಚ್ಚ ಹಸಿರು
ಈ ಎದೆಯ ತುಂಬಾ

ಮನಸಿನಲಿ
ಮತ್ತೆ ಮತ್ತೆ
ಮೂಡಿ ಬರುತಾನೆ
ಚಂದ್ರಮ

ಅಮ್ಮನ ಕೈ ತುತ್ತು
ಗಲ್ಲ ತುಂಬ
ಸಿಹಿ ಮುತ್ತು

ಚಂದ್ರನ ಜೊತೆ
ಚಕೋರಿ ಆಟ
ಇನ್ನೆಲ್ಲಿಯ ಆ ಬೆಳಕು!

**–ರಶ್ಮಿ**, ತುಮಕೂರು

ಸಿನಿತಾರೆ

## ಅಭಿಮಾನಿ ಕಂಡ ಉಪ್ಪಿ

ಕನ್ನಡಕ್ಕೀಗಾ ಹಲವು ಸ್ಟಾರ್
ಅದರಲ್ಲಿರುವುದೊಂದೇ
ರಿಯಲ್ ಸ್ಟಾರ್
ಪಡ್ಡೆ ಹುಡುಗರ ಮನಗೆದ್ದು
ಮನೆಮಾತಾದ ಪಾಪ್ಯುಲರ್ ಸ್ಟಾರ್
ಕಿಡಿಗೇಡಿಗಳ ಅಟ್ಟಹಾಸಕ್ಕೆ ಹೆದರದೆ
ತನ್ನತನ ಬಿಡದೆ ಮುನ್ನುಗ್ಗುವ ಪವರ್ಫುಲ್ ಸ್ಟಾರ್
ಬಡತನದಲ್ಲಿ ಹುಟ್ಟಿ ಬೆಳೆದು
ಕಷ್ಟದ ರುಚಿಯುಂಡು ನೊಂದು ಬೆಂಡಾಗದೆ
ಸೋಲನ್ನು ಸವಾಲಾಗಿ ಸ್ವೀಕರಿಸಿ
ಪ್ರಯತ್ನಕ್ಕೆ ಫಲ ಪಡೆದ ಲಕ್ಕಿ ಸ್ಟಾರ್
ಇಂತಹ ಸ್ಟಾರ್ ಹೆತ್ತು ಸುಖ–ಸಂತೋಷ ಪಡೆದ
ತಂದೆ–ತಾಯಿ ಲಕ್ಕು ಜೋರು
ಹೈಟಲ್ಲಿ ವೈಟಲ್ಲಿ ಡ್ಯಾನ್ಸಿಂಗ್ ಫೈಟಲ್ಲಿ
ಗೋಲ್ಡನ್ ಸ್ಟಾರ್
ಬ್ಯೂಟಿಯಲಿ ಆಕ್ಟಿಂಗಲಿ ಅಭಿಮಾನಿಗಳಿಗೆ
ಸೂಪರ್ ಸ್ಟಾರ್!

**–ಎಂ.ಚಂದ್ರಶೇಖರ್**
ಚುಂಚನಕುಪ್ಪೆ



## ಕೆ.ಶಾಂತಕುಮಾರಿ

ವಸಂತಪುರ, ಬೆಂಗಳೂರು–೫೬೦ ೦೬೧.

### ದಲಿತ ಮಹಿಳೆಯ ಆತ್ಮ ಕಥನ

# ಶಾಂತಕ್ಕಳ ಜನಪರ ಹೋರಾಟಗಳು

ಭಾಗ–೫

ಕೆ. ಶಾಂತಕುಮಾರಿ ಅವರನ್ನು ಕಳೆದ ಹದಿನೈದು ವರ್ಷಗಳಿಂದ ನಾನು ಚೆನ್ನಾಗಿ ಬಲ್ಲೆ. ಅವರ ಕುಟುಂಬದ ಜೊತೆ ನನಗೆ ಈಗಲೂ ಅನ್ಯೋನ್ಯ ನಂಟು ಉಂಟು. ಆದರೆ ಶಾಂತಕುಮಾರಿಯವರ ಚಾರಿತ್ರ್ಯವನ್ನೇ ವಧೆ ಮಾಡುವಂತ ಅನಾಮಿಕ ಪತ್ರ ಬಂದಿದೆ. ಅದು ತುಂಬಾ ಅಸಭ್ಯ ಹಾಗೂ ಅಶ್ಲೀಲವಾಗಿರುವುದರಿಂದ ಇಲ್ಲಿ ಪ್ರಕಟಿಸುತ್ತಿಲ್ಲ. ಮುಂದೆ ಇದೇ ರೀತಿ ಅವರು ಮುಂದುವರೆದರೆ ಸಾಕ್ಷಿ ಸಮೇತ ಹಿಡಿದು ಕಾನೂನು ರೀತಿಯ ಕ್ರಮ ಕೈಗೊಳ್ಳಬೇಕಾಗುತ್ತದೆ ಎಂದು ಈ ಮೂಲಕ ಎಚ್ಚರಿಸುತ್ತಿದ್ದೇವೆ. –ಸಂ.

## ಎಲೇ ಸಗಣಿ ತಟ್ಟಿದರೆ ಜೀವನವಾದೆ!

ಅಪ್ಪನ ಕುಲ ದೊಡ್ಡದು, ಅಮ್ಮಾ ಹರಿಜನ ಎನ್ನುವ ಕಾರಣಕ್ಕಾಗಿ ಅಪ್ಪನ ತಾಯಿ ನನ್ನ ಅಮ್ಮನನ್ನು ಸೊಸೆ ಎಂದು ಒಪ್ಪಿಕೊಂಡಿರಲಿಲ್ಲ. ಅಪ್ಪ ಆಗಾಗ ನಮ್ಮನ್ನು ತೊರೆದು ಹೋಗುತ್ತಿದ್ದುದರಿಂದ ನಾಲ್ಕು ಜನ ಮಕ್ಕಳನ್ನು ಕಟ್ಟಿಕೊಂಡು ಜೀವನ ನಡೆಸುವುದು ಅಮ್ಮನಿಗೆ ಕಷ್ಟವಾಗುತ್ತಿತ್ತು. ಅಜ್ಜಿ ಮನೆಯಲ್ಲಿ ಐದು ಸೀಮೆ ಹಸುಗಳಿದ್ದವು. ಅವರ ಮನೆಯಲ್ಲಿ ಹಾಲು ತುಪ್ಪದ ಹೊಳೆಯೇ ಹರಿಯುತ್ತಿತ್ತು. ಸೀಮೆ ಹಸುಗಳ ಸಗಣಿ ಎತ್ತಲಾರದೆ ಕೊಟ್ಟಿಗೆ ಗುಡಿಸಿ ಕ್ಲೀನ್ ಮಾಡುವ ಕೆಲಸ ಅಮ್ಮನಿಗೆ ವಹಿಸಿದ್ದರು. ಅಮ್ಮ ಬೆಳಿಗ್ಗೆ ನಮಗೆ ಕಾಫಿ ಮಾಡಿಕೊಟ್ಟು ಕೊಟ್ಟಿಗೆ ಗುಡಿಸಿ ಸಗಣಿ ತರಲು ಅಜ್ಜಿ ಮನೆಗೆ ಹೋಗುತ್ತಿದ್ದಳು. ಮನೆಗೆ ಬರಲು ಮಧ್ಯಾಹ್ನ ೧೨ ಗಂಟೆ ಆಗುತ್ತಿತ್ತು. ಅಷ್ಟರೊಳಗೆ ಮೂರು ಪುಟ್ಟಿ ಸಗಣಿ ನಮ್ಮ ಮನೆ ಅಂಗಳದಲ್ಲಿ ಗುಡ್ಡೆ ಹಾಕುತ್ತಿದ್ದಳು ಅಮ್ಮ. ದೊಡ್ಡ ಮಂಕರಿಯಲ್ಲಿ ಕೆಳಗೆ ಒಂದು ಗಟ್ಟಿ ಹಾಸಿ ಅದರ ಮೇಲೆ ಸಗಣಿಯನ್ನು ಗೋಪುರದಂತೆ ತುಂಬುತ್ತಿದ್ದಳು. ಅದು ಎಷ್ಟು ಭಾರವಾಗಿತ್ತೆಂದರೆ ಅಮ್ಮನ ಕುತ್ತಿಗೆ ಭಾರ ತಡೆಯದೆ ಎಷ್ಟೋ ಭಾರಿ ಸಗಣಿ ಪುಟ್ಟಿಯನ್ನು ಕೆಳಕ್ಕೆ ಕುಕ್ಕಿದ ಪ್ರಸಂಗಗಳು ಉಂಟು. ಅಂತೂ ಮೂರು ಮಂಕರಿ ಸಗಣಿಯಿಂದ ನಮ್ಮ ಜೀವನ ಸಾಗುತ್ತಿತ್ತು. ಮಧ್ಯಾಹ್ನ ಒಂದು ಅಡಿಗೆ ಮಾಡಿ ನಮಗೆ ಬಡಿಸಿ ನಂತರ ಮತ್ತೆ ಆ ಸಗಣಿಯನ್ನು ಮೈದಾನ ಪ್ರದೇಶಕ್ಕೆ ತೆಗೆದುಕೊಂಡು ಹೋಗಿ ಬೆರಣಿ ತಟ್ಟುತ್ತಿದ್ದಳು.

ನನ್ನ ತಾಯಿ ಕಮಲಮ್ಮನ ಬೆರಣಿ ಎಂದರೆ ಎಲ್ಲರಿಗೂ ಕೊಂಡು ಕೊಳ್ಳಲು ಖುಷಿ. ಏಕೆಂದರೆ ಕಮಲಮ್ಮನ ಬೆರಣಿ ದೊಡ್ಡದು, ಮೇಲಾಗಿ ಎಲ್ಲರೂ ಒಂದು ರೂಪಾಯಿಗೆ ೧೦೦ ಬೆರಣಿ ಚಿಕ್ಕ ಸೈಜಿನದು ಕೊಟ್ಟರೆ ಅಮ್ಮ ಮಾತ್ರ ಒಂದೂ ರೂಪಾಯಿಗೆ ೧೧೦ ಬೆರಣಿ

ಕೊಡುತ್ತಿದ್ದಳು. ಅಷ್ಟರಲ್ಲಿ ನಾಲ್ಕು ಮಕ್ಕಳನ್ನು ಸಾಕಬೇಕಿತ್ತು. ಒಮ್ಮೊಮ್ಮೆ ಈ ಏಳು-ಎಂಟು ರೂಪಾಯಿ ಬೆರಣಿ ಸಹ ಮಾರಾಟವಾಗುತ್ತಿರಲಿಲ್ಲ. ದಿನಕ್ಕೆ ಕನಿಷ್ಠ ಎಂದರೂ ಐದು ರೂ. ಬೆರಣಿಯಷ್ಟೇ ಮಾರಾಟವಾಗುತ್ತಿತ್ತು. ಇಷ್ಟರಲ್ಲಿ ಅಮ್ಮ ನುಚ್ಚು, ರಾಗಿ ತಂದು ಮುದ್ದೆ ಮಾಡಿ ಹಾಕುತ್ತಿದ್ದಳು. ಒಮ್ಮೊಮ್ಮೆ ಸಾರಿಗೆ ಕಾಸಿಲ್ಲದಿದ್ದಾಗ ಹುಣಸೇ ಹಣ್ಣಿನ ಗೊಜ್ಜೇ ನಮ್ಮನೆ ಸಾರು. ನಿಜಕ್ಕೂ ಆ ಹುಣಸೇಹಣ್ಣಿ ಗೊಜ್ಜನ್ನು ಪರಮಾನಂದದಿಂದ ತಿನ್ನುತ್ತಿದ್ದೆವು. ಅಮ್ಮ ಮಾಡುತ್ತಿದ್ದ ಹಸಿ ಹುಣಸೇಹಣ್ಣಿನ ಗೊಜ್ಜನ್ನು ನೆನಸಿಕೊಂಡರೆ ಈಗಲೂ ಬಾಯಲ್ಲಿ ನೀರೂರುತ್ತದೆ. ಬರಿ ಏಳು-ಎಂಟು ರೂಪಾಯಿ ಜೀವನಕ್ಕೆ ಸಾಲದಿದ್ದಾಗ ಸಂಜೆ ಸಹ ಅಮ್ಮ ಸಗಣಿ ತರಲು ಅಜ್ಜಿ ಮನೆಗೆ ಹೋಗಿ ಮತ್ತೆ ಎರಡು ಪುಟ್ಟಿ ಸಗಣಿ ತಂದು ಬೆರಣಿ ತಟ್ಟುತ್ತಿದ್ದಳು. ಕೊಟ್ಟಿಗೆಯನ್ನು ಶುಭ್ರಗೊಳಿಸಿ ಐದಾರು ಪುಟ್ಟಿ ಸಗಣಿ ತಂದು ಅದನ್ನು ಬೆರಣಿ ತಟ್ಟಿ ಒಣಗಿಸಿ ಗೋಪುರದಂತೆ ಜೋಡಿಸಿರುತ್ತಿದ್ದಳು. ಬೆರಣಿ ಗೋಪುರ ಎಷ್ಟು ಚೆಂದವಾಗಿರುತ್ತಿತ್ತು. ಒಂದು ಚೂರು ವ್ಯತ್ಯಾಸವಾಗದಂತೆ ಬಹಳ ಶಿಸ್ತಿನಿಂದ ಬೆರಣಿ ಜೋಡಿಸುವ ರೀತಿಯನ್ನು ನೋಡಿ ನಾನು ಬಹಳ ಆಶ್ಚರ್ಯಪಟ್ಟಿದ್ದೇನೆ. ಮಳೆಗಾಲ ಬರುವಷ್ಟರಲ್ಲಿ ಅಮ್ಮ ಎರಡು-ಮೂರು ಬೆರಣಿ ಗೋಪುರವನ್ನು ಜೋಡಿಸುತ್ತಿದ್ದಳು. ಒಂದೊಂದರಲ್ಲಿ ಎರಡು ಸಾವಿರದಿಂದ ಮೂರು ಸಾವಿರ ಬೆರಣಿ ಇರುತ್ತಿದ್ದವು. ಮಳೆಗಾಲದಲ್ಲಿ ಬೆರಣಿ ಒಣಗದೆ ಹಾಳಾಗುತ್ತಿದ್ದವು. ಎಷ್ಟೋ ಬಾರಿ ಮಳೆಗಾಲದಲ್ಲಿ ಹಸಿವಿನಿಂದ ದಿನಗಳನ್ನು ಕಳೆದಿದ್ದೇವೆ.

ಅಮ್ಮ ಅಜ್ಜಿ ಮನೆಯಲ್ಲಿ ಕೊಟ್ಟಿಗೆ ಗುಡಿಸುವಾಗ ಯಾರಾದರೂ ಈ ಹೆಂಗಸು ಯಾರು ಬಹಳ ಚೆನ್ನಾಗಿ ಕ್ಲೀನ್ ಮಾಡುತ್ತಾಳೆ ಪಾಪ ಎಂದಾಗ ಹುಂ ಅವಳು ನಮ್ಮ ಮನೆ ಕೆಲಸದವಳು ಎನ್ನುತ್ತಿದ್ದಳು ನನ್ನ ಅತ್ತೆ. ಅಪ್ಪನಿಗೆ ಒಬ್ಬಳೇ ತಂಗಿ. ಆದರೆ ಈಕೆಗಿದ್ದ ದುರಹಂಕಾರ ಯಾವ ವಿಲನ್‌ಗಿಂತಲೂ ಕಡಿಮೆ ಇಲ್ಲ. ರಾತ್ರಿ ಉಳಿದ ಅನ್ನ ಸಾರು ಅಮ್ಮನ ಎದುರೇ ಪಾತ್ರೆಗಟ್ಟಲೇ ತಂದು ದನದ ತೊಟ್ಟಿಗೆ ಸುರಿಯುತ್ತಿದ್ದಳು. ಅಮ್ಮ ಎಷ್ಟೋ ಬಾರಿ ಅಯ್ಯೋ ಈ ಅನ್ನ ನನ್ನ ಮಕ್ಕಳಿಗಾದರೂ ಕೊಟ್ಟರೆ ಹಸಿವನ್ನಾದರೂ ನೀಗಿಸಬಹುದಲ್ಲವೆ? ಎಂದು ಕಣ್ಣೀರಿಡುತ್ತ ಕೊಟ್ಟಿಗೆ ಗುಡಿಸಿ ಬರುತ್ತಿದ್ದಳು. ಒಂದು ದಿವಸ ನಾಚಿಕೆ ಇಲ್ಲದೆ ಬಾಯಿ ಬಿಟ್ಟು ಅಮ್ಮ ಅದನ್ನು ಯಾಕೆ ತೊಟ್ಟಿಗೆ ಸುರಿಯುತ್ತೀರಾ ಮಕ್ಕಳಿಗಾದರೂ ಕೊಟ್ಟರೆ ಜೀವನ ಕಳೆಯುತ್ತೆ ಎಂದಾಗ ಹ್ಞಾ ಹೋಗಿ ಬಿಟ್ಟು ಓಡೋಗಿದ್ದಾನಲ್ಲ ನಿನ್ನ ಗಂಡ ಅವನನ್ನು ಕೇಳು ತಂದಾಕು ಅಂತ ಹೇಳಿ ಮೂತಿ ಸೊಟ್ಟ ಮಾಡಿ ಹೋದಳಂತೆ. ಇವಳು ಅನ್ನ ಕೇಳಿದಳಲ್ಲ. ಇವಳನ್ನ ಹೇಗಾದರೂ ಮಾಡಿ ಸಗಣಿ ಎತ್ತದಂತೆ ಮಾಡಬೇಕೆಂದು ಅತ್ತೆ ಯೋಚಿಸಿದಳು. ಮಾರನೆ ದಿವಸ ಸಗಣಿ ಎತ್ತಲು ಹೋದಾಗ ಬೈಯ್ಯಲು ಶುರುಮಾಡಿಕೊಂಡಳು. ದಿನ ಅಮ್ಮನಿಗೆ ಒಂದು ಕಪ್ಪು ಕಾಫಿಕೊಡುತ್ತಿದ್ದಳು. ಅದನ್ನು ನೆಪ ಹಾಕಿ ಬೇವರ್ಸಿಮುಂಡೆ ನಮ್ಮನೇಲಿ ಅರ್ಧ ಡಜನ್ ಕಾಫಿ ಕಪ್ಪು ಇಲ್ಲ. ಎಲ್ಲಾ ಇವಳೇ ಸಗಣಿಯಲ್ಲಿ ಬಚ್ಚಿಟ್ಟುಕೊಂಡು ಹೋಗುತ್ತಿರಬೇಕು ಎಂದು ಬೈಯ್ಯಲು ಶುರುಮಾಡಿದಳು. ಚಿಕ್ಕ ಹುಡುಗಿಯಾದ ಅತ್ತೆಯನ್ನು ಕುರಿತು ಅಮ್ಮ ವಿಜಯ ಹಾಗೆಲ್ಲಾ ಮಾತಾಡಬೇಡ. ನನ್ನ ಜೀವ ಹೋದರೂ ಸರಿ ನಾನು ಹಾಗೆಲ್ಲಾ ಮುಟ್ಟೊಲ್ಲ ಎಂದು ಎಷ್ಟು ಕೇಳಿದರೂ ಹೊಡೆಯಲು ಬಂದಳು. ಅಮ್ಮ ಅಳುತ್ತಲೇ ಬರೀ ಪುಟ್ಟಿಯನ್ನು

ತೆಗೆದುಕೊಂಡು ಬಂದಳು. ನಡೆದ ವಿಷಯವನ್ನು ನನ್ನ ಮುಂದೆ ಹೇಳಿಕೊಂಡು ಕಣ್ಣು ಕೆಂಪಗಾಗುವವರೆಗೂ ಅತ್ತಳು.

ಒಮ್ಮೊಮ್ಮೆ ಮೂರು ದಿವಸ ಹೊಲೆಗೆ ಬೆಂಕಿ ಹಾಕುತ್ತಿರಲಿಲ್ಲ. ಆಗ ಹಸಿವನ್ನು ತಡೆಯಲಾರದೆ ನಾನು ನನ್ನ ತಮ್ಮ ಬಾಬು ಒಂದು ಸಿಲ್ವರ್ ಟಿಫನ್ ಕ್ಯಾರಿಯರ್ ಹಿಡಿದುಕೊಂಡು ಶ್ರೀನಗರದ ಅಜ್ಜಿ ಮನೆಗೆ ಹೋಗುತ್ತಿದ್ದೆವು. ಅಜ್ಜಿ ಮತ್ತು ತಾತನಿಗೆ ನಮ್ಮ ಮೇಲೆ ಒಂದಿಷ್ಟು ಕನಿಕರವಿತ್ತು. ನಮ್ಮನ್ನು ಯಾವತ್ತೂ ಮೊಮ್ಮಕ್ಕಳೆಂದು ಒಪ್ಪಿಕೊಂಡಿರಲಿಲ್ಲ. ಅತ್ತೆ ವಿಜಯ ಮನೆಯಲ್ಲಿ ಇದ್ದಾಳೊ ಇಲ್ಲವೋ ಎಂದು ಬಗ್ಗಿ ಬಗ್ಗಿ ನೋಡುವುದೇ ಒಂದು ಸಾಹಸವಾಗುತ್ತಿತ್ತು. ನಮ್ಮನ್ನು ನೋಡಿದ ಅತ್ತೆ ಹೇಯ್ ಅಂದರೆ ಸಾಕು ಅಲ್ಲೆ ಗಡಗಡ ನಡುಗಿ ಅದೆಷ್ಟೋ ಬಾರಿ ನನ್ನ ತಮ್ಮ ಉಚ್ಚೆ ಹುಯ್ದುಕೊಂಡಿದ್ದಾನೆ. ನಾನು ನಡುಗುತ್ತಲೇ ಟಿಫನ್ ಬಾಕ್ಸ್ ಹಿಡಿದು ಮುಂದೆ ಹೋಗುತ್ತಿದ್ದೆ. ಅಜ್ಜಿ ಕರೆದು ದೊಂಡ ಮುಂಡ ಪಿಲ್ಲಲು ಆಕಲಿತೊ ವಂಚಿವುಂಡಾರು ಏದೈನಾ ವಾಸಿ ಪಂಪಿಯ್ಯವೇ ಎನ್ನುತ್ತಿದ್ದಳು ಅಜ್ಜಿ. ಗೊಣಗುತ್ತಲೇ ಹೋಗಿ ಒಂದಿಷ್ಟು ಬಾಕ್ಸಿಗೆ ತುಂಬಿ ಕುಕ್ಕಿ ನಾಳೆಯಿಂದ ಬಂದರೆ ಹುಟ್ಟಿಲ್ಲ ಅನ್ನಿಬಿಡ್ತೀನಿ ಎಂದು ಗದರಿಸುತ್ತಿದ್ದಳು. ಒಂದು ವೇಳೆ ಅತ್ತೆ ಇರದಿದ್ದರೆ ಅಜ್ಜಿ ತಾತ ಹೊಟ್ಟೆ ತುಂಬಾ ಊಟ ಹಾಕಿ ಬಾಕ್ಸಿಗೆ ತುಂಬಿ ನಾಲ್ಕಾಣೆ ಕೈಗೆ ಕೊಡುತ್ತಿದ್ದರು. ತಾತ ಕೊಡುತ್ತಿದ್ದ ನಾಲ್ಕಾಣೆಯಲ್ಲಿ ಹತ್ತು ಪೈಸೆಗೆ ಕಡ್ಲೆಕಾಯಿ ತೆಗೆದುಕೊಂಡು ತಿನ್ನುತ್ತ ಹದಿನೈದು ಪೈಸೆಯನ್ನು ಅಮ್ಮನಿಗೆ ತಂದು ಕೊಡುತ್ತಿದ್ದೆ. ಇಂತಹ ಗಯ್ಯಾಳಿ ಸೋದರತ್ತೆ ತಿನ್ನಲು ಅನ್ನವಿಲ್ಲದೆ, ಉಡಲು ಬಟ್ಟೆ ಇಲ್ಲದೆ ಬಂದಾಗ ಹಳೆಯದೆಲ್ಲವನ್ನು ಮರೆತು ನನ್ನ ತಾಯಿ ತುಂಬು ಹೃದಯದಿಂದ ಆದರಿಸಿದಳು.

---

## ಅನಂತಕ್ಕೆ ನನ್ನ ನಿರ್ಧಾರಗಳು



೧. ಉತ್ತರ ಕನ್ನಡದ ಪ್ರತಿ ತಾಲ್ಲೂಕಿನಿಂದ ಸಾಧ್ಯವಾದಷ್ಟು ಓದುಗರನ್ನು ಚಂದಾದಾರರನ್ನಾಗಿ ಮಾಡಿಕೊಡುವೆ.

೨. ಇಲ್ಲಿರುವ ಉತ್ತಮ ಬರಹಗಾರರನ್ನು ಅನಂತಕ್ಕೆ ಬರೆಯಲು ಪ್ರಚೋದಿಸುವೆ.

೩. ಅನಂತದ ಎಲ್ಲಾ ಬಂಧುಗಳೊಡನೆ ವಿಧೇಯನಾಗಿಯೇ ನನಗಿರುವ ಈ ಪತ್ರಿಕೆಗೆ ಬೇಕಾದ ಹೊಸತನಗಳ ಆಶಯಗಳನ್ನು ಮುಂದಿಡುವೆ–ಎಲ್ಲರ ಸಮ್ಮತಿಯ ನಿರ್ಧಾರದಲ್ಲಿ ಪಾಲ್ಗೊಳ್ಳುವೆ.

೪. ಅನಂತದ ಬ್ಯಾನರಡಿಯಲಿ ವರ್ಷದಲ್ಲಿ ಸಾಧ್ಯವಾದಷ್ಟು ಸಾಹಿತ್ಯ ಚರ್ಚೆಗಳನ್ನು ಈ ಜಿಲ್ಲೆಯ ಒಳಗೂ ಹೊರಗೂ ನಡೆಸಿ ರಾಜಧಾನಿಯ ಪಂಡಿತರು ನಾಡಿನಾದ್ಯಂತ ಈ ಚರ್ಚೆಗಳಲ್ಲಿ ಪಾಲ್ಗೊಳ್ಳಲು ಶ್ರಮಿಸುವೆ.

೫. ಎಲ್ಲಕ್ಕೂ ಮುಖ್ಯವಾಗಿ ಅನಂತದ ಗಟ್ಟಿತನಕ್ಕೆ, ಪ್ರಕಾಶಕನ ಹಣಕಾಸಿನ ಭದ್ರತೆಗೆ ಯೋಚಿಸುವೆ. ಕಾರ್ಯಗತನಾಗುವೆ.

–ಅಬ್ದುಲ್ ರೆಹಮಾನ್

## ಪುಸ್ತಕ ಪರಿಚಯ



* ತವು (ಕಥಾ ಸಂಕಲನ), ಲೇ:ಡಾ|| ಬಸವರಾಜ ಡೋಣೂರ, ಮುದ್ರಣ:೨೦೦೨, ಪುಟ:೧೨೪, ರೂ:೭೫/- ಪ್ರ:ನೀಲಪರ್ವತ ಪ್ರಕಾಶನ, ಧಾರವಾಡ.

ಗೆಳೆಯ ಬಸವರಾಜ ಡೋಣೂರ ಸಾಹಿತ್ಯವನ್ನು ಅದರ ಮೂಲಕ ಬದುಕನ್ನು ಗಂಭೀರವಾಗಿ ಅವಲೋಕಿಸುವ ಪ್ರವೃತ್ತಿಯವರು. ಅವರ ಈ ಕಥೆಗಳ ದ್ರವ್ಯವೆಲ್ಲ ಅವರ ಗ್ರಾಮೀಣ ಹಿನ್ನೆಲೆಯಲ್ಲಿಯೆ ಬಂದಿದೆ; ಹದಿಹರೆಯದ ಕ್ರಿಯಾಕ್ಷೇತ್ರವಾದ ನಗರದ ಬದುಕಿನೊಂದಿಗೆ ಈ ಹಿನ್ನೆಲೆ ಮುಖಾಮುಖಿಯಾಗುತ್ತ ವೈಯಕ್ತಿಕ ನೆಲೆಯಲ್ಲಿ ಉದ್ಭವಿಸುವ ಅನೇಕ ಸಂಘರ್ಷಗಳು ಕೆಲವು ಕಥೆಗಳಲ್ಲಿ ದಾಖಲಾಗಿವೆ. ಕಥಾ ನಾಯಕನ 'ನೈತಿಕ' ನೆಲೆಗಟ್ಟು, ಅನುಭವದ ಅರಳುವಿಕೆಗೆ ಮಿತಿಯಾಗಿದೆಯೆ, ಸವಾಲಾಗಿದೆಯೆ ಎಂಬುದು ಓದುಗನ ಮಟ್ಟಿಗೆ ಕುತೂಹಲಕಾರಿ ಅಂಶ. ಬದಲಾಗುತ್ತಿರುವ ನಮ್ಮ ಗ್ರಾಮೀಣ ಪರಿಸರ ಇಲ್ಲಿ ಅನೇಕ ಪಾತ್ರಗಳ, ಸನ್ನಿವೇಶಗಳ ಮೂಲಕ ನಾಟಕೀಯವಾಗಿ ಬಿಚ್ಚಿಕೊಂಡಿದೆ. ಲೇಖಕರ ನಿರೂಪಣಾ ತಂತ್ರ ಬಹಳ ಮಟ್ಟಿಗೆ ಸಾಂಪ್ರದಾಯಿಕವೇ ಆಗಿದ್ದರೂ 'ರಾಮ ಹೋಗಿ ಸಾಧು ಆದದ್ದು' ಕತೆಯ ಅಭಿವ್ಯಕ್ತಿಯ ಸಂಯಮ ಮತ್ತು ಸನ್ನಿವೇಶಗಳ ಜೋಡಣೆಯ ರೀತಿ ಅದಕ್ಕೊಂದು ವಿಚಿತ್ರ ಆಕರ್ಷಣೆಯನ್ನು ಒದಗಿಸಿದೆ.

–ಪ್ರೊ. ಚಂಪಾ

* ಹಸಿವು (ಕಥಾ ಸಂಕಲನ), ಲೇ:ಪರಮೇಶ ಕರೂರು, ಮುದ್ರಣ:೨೦೦೩, ಪುಟ:೫೬, ರೂ:೩೦/- ಪ್ರ : ಇಂಚರ ಪ್ರಕಾಶನ, ತುಮರಿ, ಶಿವಮೊಗ್ಗ-೫೭೭ ೪೦೧.

ಪರಮೇಶ್ ಕರೂರು ಅವರ ಕಥೆಗಳು ಗ್ರಾಮ್ಯ ಬದುಕಿನ ನೈಜ ಚಿತ್ರಣದ ಕಥಾ ಹಂದರ ಪಡೆದಿವೆ. ಬಡತನದಂತ ತೀರ ಸರಳ ವಸ್ತುವನ್ನು ಕೂಡ ಮನಮುಟ್ಟುವಂತೆ ನೇಯಲು ಇವರು ಬಳಸುವ ಭಾಷಾ ಸೊಗಡು ವಿಶೇಷವಾದದ್ದು. ಸಹಜ ಸನ್ನಿವೇಶಗಳ ನಿರ್ಮಾಣ ಇವರ ಕಥೆಗಳಲ್ಲಿವೆ. ಅಂತಹ ಒಂದು ಪ್ರಾಮಾಣಿಕ ಪ್ರಯತ್ನ 'ಅಪ್ಪ'ನಂತ ಕಥೆಯಲ್ಲಿ ದಟ್ಟವಾಗಿದೆ. ಮನಸ್ಸನ್ನು ಕಲಕುವ ಅಪ್ಪನ ಬದುಕಿನ ಆಳದ ಅನುಭವ, ಆಕೆಯ ನೋವು, ತಲ್ಲಣ ಕೆಳ ಮಧ್ಯಮ ವರ್ಗದ ಎಲ್ಲರ ಅಪ್ಪನದು ಆಗಿರಬಹುದು. ಸ್ವಗತದಂತೆ ಬಿಚ್ಚುವ ಈ ಕಥೆಯ ತಂತ್ರಗಾರಿಕೆ ಕೈಕುಸುರಿ ಕೆಲಸ ನಡೆಸಿದಂತೆ ಓದಿಸಿಕೊಳ್ಳುತ್ತವೆ.



ಅಸಹಾಯಕತೆಯ ಬೆನ್ನಲ್ಲೇ ಉಳ್ಳವರ ದರ್ಪ, ಶ್ರೀಮಂತಿಕೆ, ಕ್ರೌರ್ಯ ಮನೆ ಮಾಡಿರುವುದು 'ತಬ್ಬಲಿಗಳು' ಕಥೆಯಲ್ಲಿ ಚಿತ್ರಿತವಾಗಿರು-ವುದರಿಂದ ಇದು ಭಿನ್ನ ಜಾಡಿನ ಕಥೆಯಾಗಿದೆ. ಲೇಖಕರು ಹಳ್ಳಿಯ ವಿವಿಧ ಸಮಸ್ಯೆಗಳನ್ನು ಸೂಕ್ಷ್ಮವಾದ ಕಣ್ಣಿನಲ್ಲಿ ನೋಡಿರುವುದನ್ನು ಕಥೆಗಳು ಅನಾವರಣಗೊಳಿಸುತ್ತವೆ.

–ಆರ್.ಜಿ. ಹಳ್ಳಿ ನಾಗರಾಜ್



ಧರ್ಮ

## ಬ್ರೆಡ್-ಬನ್ ಮಾಡುವುದು ಹೀಗೆ....

ಎಣ್ಣೆ ಪದಾರ್ಥಗಳನ್ನು ಹೆಚ್ಚಿಗೆ ಬಳಸಿದರೆ ಅನಾರೋಗ್ಯಕ್ಕೆ ಗುರಿಯಾಗಬೇಕಾಗುತ್ತದೆ ಎಂದು ಡಾಕ್ಟರ್ ಸಲಹೆ ನೀಡುತ್ತಾರೆ. ಇದಕ್ಕೆ ಪರ್ಯಾಯವಾದ ಬೇಸಿಕಲಿ ಫುಡ್ ಎಂದರೆ ಬ್ರೆಡ್-ಬನ್‌ಗಳು. ಇವನ್ನು ಕಲಿತುಕೊಂಡು ಮನೆಯಲ್ಲಿಯೇ ಮಾಡಿಕೊಳ್ಳಬಹುದು. ಇದರಿಂದ ಸಮಯ ಅಷ್ಟೇ ಅಲ್ಲ ನೀರಿನ ಉಳಿತಾಯ ಸಹ ಆಗುತ್ತದೆ. ಚಪಾತಿ ಮಾಡುವುದು ಎಷ್ಟು ಸುಲಭವೋ ಅಷ್ಟೇ ಬ್ರೆಡ್-ಬನ್ ಮಾಡುವುದು ಸಹ. ಈ ಒತ್ತಡದ ಯುಗದಲ್ಲಿ ಇಡ್ಲಿ, ದೋಸೆ, ಉಪ್ಪಿಟ್ಟು ಮಾಡುವಷ್ಟು ವ್ಯವಧಾನ ಇರುವುದಿಲ್ಲ. ಬ್ರೆಡ್ ಬನ್ ಮಾಡಲು OVEN-ಚಿಕ್ಕ ಎಲೆಕ್ಟ್ರಿಕ್ ಒಲೆ ಇರಬೇಕಾಗುತ್ತದೆ. ಇದಕ್ಕೆ ಎರಡು ಸಾವಿರ-ಎರಡು ಸಾವಿರದೈನೂರು ಆಗುತ್ತದೆ. ಇದನ್ನು ತಂದಿಟ್ಟುಕೊಂಡರೆ ನೀವು ಮನೆಗೆ ತರುವ ಯಾವುದೇ ತಿಂಡಿ ಪದಾರ್ಥಗಳನ್ನು ಬಿಸಿಮಾಡಿ ತಿನ್ನಬಹುದು. ಮೌಲ್ಡ್‌ನಲ್ಲಿ ಹಾಕಿ ಮಾಡುವುದೇ ಬ್ರೆಡ್. ತಟ್ಟೆಯಲ್ಲಿ ಹಾಕಿ ಮಾಡುವುದೇ ಬನ್.

| ಸಾಮಗ್ರಿಗಳು |
|---|
| ಮೈದ ೧ ಕೆ.ಜಿ |
| ಡಾಲ್ಡ ೨೦ ಗ್ರಾಂ |
| ಸಕ್ಕರೆ ೩೦ ಗ್ರಾಂ |
| ಉಪ್ಪು ೧೫ ಗ್ರಾಂ |
| ನೀರು ೬೦೦ ಗ್ರಾಂ |
| ಈಸ್ಟ್ ೭-೧೦ಗ್ರಾಂ |

### ಮಾಡುವ ವಿಧಾನ

ಈಸ್ಟ್ ಎಂದರೆ ಉಬ್ಬುವಿಕೆಗೆ ಬಳಸುವ ವಸ್ತು. ಮೊದಲು ಇದನ್ನು ರೆಡಿ ಮಾಡಿಕೊಳ್ಳಬೇಕು. ಈಸ್ಟ್ ಮತ್ತು ಅರ್ಧ ಚಮಚ ಸಕ್ಕರೆ, ಒಂದು ಗ್ಲಾಸ್ ನೀರನ್ನು ಚಿಕ್ಕ ಪಾತ್ರೆಯಲ್ಲಿ ಹಾಕಿ ೫ ನಿಮಿಷ ಮುಚ್ಚಿಡಬೇಕು. ಅನಂತರ ಮೈದಾಕ್ಕೆ ನೀರು, ಸಕ್ಕರೆ, ಉಪ್ಪು, ಹಾಕಿ ಮಿಶ್ರಣ ಮಾಡಬೇಕು. ಬಳಿಕ ರೆಡಿಯಾಗಿರುವ ಈಸ್ಟ್ ಬೆರೆಸಿ ಚೆನ್ನಾಗಿ ತಿರುವಬೇಕು. ಆಗ ನೈಸಾಗುತ್ತದೆ. ಈಗ ಡಾಲ್ಡ ಸೇರಿಸಿ ೧೦-೧೫ ನಿಮಿಷ ಕೈಯ್ಯಲ್ಲಿ ಮಸೆಯಬೇಕು, ಸ್ಮೂತ್ ಆಗುತ್ತದೆ. ಬಟ್ಟೆಯನ್ನು ಒದ್ದೆ ಮಾಡಿ ಚೆನ್ನಾಗಿ ಹಿಂಡಿ ೧೫ ನಿಮಿಷ ಮುಚ್ಚಿಡಿ. ನಂತರ ತೆಗೆದು ನೋಡಿದರೆ ಉಬ್ಬಿರುತ್ತದೆ. ಆಗ ಅದನ್ನು ಬೆರಳಲ್ಲಿ ಒತ್ತಿ, ಗ್ಯಾಸ್ ಹೋಗುತ್ತದೆ. ೫ ನಿಮಿಷ ಮತ್ತೆ ಬಟ್ಟೆಯಲ್ಲಿ ಮುಚ್ಚಿಡಿ. ಈಗ ಬ್ರೆಡ್ ಬೇಕಾದರೆ ಅದನ್ನು ಮೌಲ್ಡ್‌ಗೆ ಹಾಕಿ, ಬನ್ ಬೇಕಾದರೆ ಚಿಕ್ಕ ಚಿಕ್ಕ ತಟ್ಟೆಯಲ್ಲಿ ಹಾಕಿ ೨೫-೩೦ ನಿಮಿಷ ೪೫೦ ಸೆಂಟಿಗ್ರೇಡ್ ಉಷ್ಣಾಂಶದಲ್ಲಿ ಬೇಯಿಸಬೇಕು. ಬ್ರೆಡ್-ಬನ್ ರೆಡಿಯಾದ ಮೇಲೆ ಬಿಸಿ ಇದ್ದಾಗಲೇ ಸ್ವಲ್ಪ ಎಣ್ಣೆ ಅಥವಾ ಬೆಣ್ಣೆ ಹಾಕಿದರೆ ಸಾಫ್ಟ್ ಆಗಿ ಗಮಗಮ ಎನ್ನುತ್ತಿರುತ್ತದೆ. ಈಗ ಹೀಗೆ ತಯಾರಾದ ಬ್ರೆಡ್-ಬನ್ ಅನ್ನು ಮನೆಯಲ್ಲಿ ಮೂರು ದಿನದವರೆಗೆ ಇಟ್ಟು ತಿನ್ನಬಹುದು. ಬೇಕರಿಗಳಲ್ಲಿ ಪ್ಯಾಕ್ ಮಾಡಿರುವ ಬ್ರೆಡ್-ಬನ್‌ಗಳಿಗೆ ಕೆಡದಂತೆ ಕೆಮಿಕಲ್ಸ್ ಹಾಕಿರುತ್ತಾರೆ. ನೀವು ಮಾಡುವ ಬ್ರೆಡ್ ಬನ್‌ಗೆ ಸ್ವಲ್ಪ ಡಾಲ್ಡ, ಸಕ್ಕರೆ ಜಾಸ್ತಿ ಹಾಕಿದರೆ ಸ್ವೀಟಾಗಿ ಸಾಫ್ಟಾಗಿ ಇರುತ್ತದೆ.

(ಮುಂದಿನ ಸಂಚಿಕೆಗೆ ಸ್ಯಾಂಡ್ ಪಿಜ್ಸ್ ಬಗ್ಗೆ ತಿಳಿಸಲಾಗುತ್ತದೆ)

ಪ್ರಹ್ಲಾದ್ ಪತ್ರ–ಸಂಪಾದಕನ ಉತ್ತರಕ್ಕೆ ಗಂಭೀರ ಪ್ರತಿಕ್ರಿಯೆ*

# ಮನುಷ್ಯ..... ಬೆತ್ತಲು.....ಮಾನವ!




ಪ್ರಿಯ ಪ್ರಕಾಶ್,

ಮೇ ತಿಂಗಳ ಅನಂತದಲ್ಲಿ ಸಂಚಯ ಸಂಪಾದಕ ಡಿ.ವಿ.ಪ್ರಹ್ಲಾದ್ ನಿಮಗೆ ಬರೆದ ಪತ್ರ ಹಾಗೂ ಆ ಪತ್ರಕ್ಕೆ ನೀವು ಪ್ರತಿಕ್ರಿಯಿಸಿ ವಾಸ್ತವಾಂಶಗಳನ್ನು ಅರಿವು ಮಾಡಿಕೊಡಲು ಪ್ರಯತ್ನಿಸಿದ ಪತ್ರಗಳನ್ನು ಓದಿದ ನಂತರ ಒಂದಿಷ್ಟು ಅನಿಸಿಕೆಗಳನ್ನು ತಿಳಿಸಬೇಕಿನಿಸಿತು.

ಪ್ರಹ್ಲಾದ್ ಹೇಳುತ್ತಾರೆ.... 'ಸಾಹಿತ್ಯಕ್ಕಿಂತ ಬದುಕು ದೊಡ್ಡದು. ಈಗಿರುವಾಗ ನಿಮ್ಮ ಕುಟುಂಬದ ಭದ್ರತೆ ಮಾಡದೆ ಯಾವ ಕೆಲಸ, ಪತ್ರಿಕೆ ಮಾಡಿದರೂ ಅದು ರಾಷ್ಟ್ರೀಯ ವೇಸ್ಟು, ನಿಮ್ಮ ಸ್ವಂತ ಮಾತುಗಳೆಲ್ಲ ಒಂದು ಬಗೆಯ ಆತ್ಮರತಿ ರೋಗ, ಇಂತಹ ರೋಗ ಹಲವು ಟ್ಯಾಬುಲಾಯಿಡ್ ಪತ್ರಿಕೆಗಳ ಸಂಪಾದಕರಲ್ಲಿದೆ, ಇಂಥವುಗಳಿಂದ ಹತಾಶೆ ಹೆಚ್ಚುತ್ತದೆ ಮತ್ತು ನಿಮ್ಮ ಅಳಲುಗಳನೆಲ್ಲ ಓದಿ ಕೆಲ ಮಂದಿ ಮರಗುತ್ತಾರೆ. ಮುದಿ ಲೇಖಕರು ದೇಶಾವರಿ ಹೊಗಳುತ್ತಾರೆ. ಆದ್ದರಿಂದ ಪತ್ರಿಕೆ ಮಾಡಲೇ ಬೇಕೆಂದಿದ್ದರೆ ಉತ್ತಮ ತಯಾರಿ, ಕ್ವಾಲಿಟಿ ವ್ಯಾಪ್ತಿಗಳನ್ನು ಕುರಿತು ಸರಿಯಾದ ಅಡಿಪಾಯ ಹಾಕಿಕೊಳ್ಳಿ, ನಿಜವೆಂಬುದು ಬಲು ಕಠೋರ...' ಮುಂತಾಗಿ ಬರೆದಿದ್ದಾರೆ.

ಪ್ರತಿಯಾಗಿ ನೀವು ನಿಮ್ಮ ಕುಟುಂಬದಲ್ಲಿ ಸಂಭವಿಸಿದ ಆಕಸ್ಮಿಕ ಅವಘಡಗಳನ್ನೆಲ್ಲ ಅನುಭವಿಸುತ್ತಿದ್ದರೂ ಸಾಹಿತ್ಯದ ಕೆರೆಯಲ್ಲಿ ಈಜು ಕಲಿಯಲು ಒದ್ದಾಡುತ್ತಾ... ಬೆಳೆಯುತ್ತ... ಬಂದ ಪರಿ ಹಾಗೂ ಇಂದು ನಿಮ್ಮ ಕುಟುಂಬ ಸರಳ ಜೀವನದಲ್ಲಿ ಸಂತೃಪ್ತಿ ಕಾಣುತ್ತ ಸಾಗುತ್ತಿರುವ ಸಂಗತಿ ಮತ್ತು ಮಗು ಅತ್ತರೆ ಮಾತ್ರ ತಾಯಿ ಹಾಲು ಕುಡಿಸುತ್ತಾಳೆ. ಅದೇ ರೀತಿ ಒಬ್ಬ ಸಂಪಾದಕನಾಗಿ ನಾನು ಯಾರು? ಎಂಬ ವಿವರಣೆ ಕೊಡದಿದ್ದರೆ ಅದೊಂದು ಉತ್ತರವೇ ಇಲ್ಲದ ಪ್ರಶ್ನೆಯಾಗುವುದಿಲ್ಲವೆ? ಇದು ಆತ್ಮರತಿಯೆ? ಕುಟುಂಬದ ಭದ್ರತೆ ಮಾಡಿರುವುದು ರಾಷ್ಟ್ರೀಯ ವೇಸ್ಟೆ? ಎಂಬುದಾಗಿ ವಿವರಿಸಿದ್ದೀರಿ.

ಗಮನಿಸಿದರೆ ಎರಡೂ ಪತ್ರಗಳ ವಿಚಾರಗಳೂ ಚಿಂತನಾರ್ಹವಾಗಿವೆ. ಸೂಕ್ಷ್ಮ ಚೌಕಟ್ಟಿನಲಿ ಗಂಭೀರವಾಗಿ ಚರ್ಚಿಸಬೇಕಾದಂತ ಸಂಗತಿಗಳು. ಸಾಹಿತ್ಯ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಎರಡೂ ವಿಚಾರಗಳು ರೈಲ್ವೆ ಹಳಿಗಳಿದ್ದಂತೆ. ಅವೆರಡೂ ಇದ್ದರೆ ಮಾತ್ರ ಉತ್ಕೃಷ್ಟ ಸಾಹಿತ್ಯವೆಂಬ ಬಂಡಿ ಉರುಳಲು ಸಾಧ್ಯ.

ಇಲ್ಲಿ ಮನುಷ್ಯ ಮೊದಲು ಪ್ರಕೃತಿಯ ಪ್ರತಿಯೊಂದನ್ನು ಪ್ರೀತಿಸುವುದನ್ನು ಕಲಿಯಬೇಕು. ಇಲ್ಲದಿದ್ದರೆ ಪೂರ್ವಗ್ರಹ ಪೀಡಿತನಾಗಿ ತರ್ಕ ಕುತರ್ಕಗಳಲ್ಲಿ ಬದುಕು ಕಳೆಯುತ್ತ.... ವಿತರ್ಕದ ಗಂಧ ತಿಳಿಯದಂತಾಗುತ್ತಾನೆ.

---

* ಮಿಕ್ಕ ಪ್ರತಿಕ್ರಿಯೆಯುಳ್ಳ ಸಾಕಷ್ಟು ಪತ್ರಗಳು ಬಂದಿವೆ.

ಪ್ರಹ್ಲಾದ್ ಬರೆಯುತ್ತಾರೆ..... ನಿಮ್ಮಂಥವರ ಪ್ರಯತ್ನಗಳನ್ನು ದೇಶಾವರಿ ಹೊಗಳುವ ಮುದಿ ಲೇಖಕರು ಕನ್ನಡದಲ್ಲಿ ಬಹಳಷ್ಟು ಇದ್ದಾರೆ ಎಂದು. ನಿಜ, ಇದ್ದಾರೆ. ಆದರೆ ಇಲ್ಲಿ ನಾವು ನೋಡುವ ನೋಟ ಬದಲಾಗಬೇಕಿದೆ. ಅಂತಹ ಮುದಿ ಲೇಖಕರ ಪ್ರೋತ್ಸಾಹದ ಮಾತುಗಳು ಅಂಬೆಗಾಲಿಕ್ಕುವ ಕಂದ ಮುಂದಡಿ ಇಟ್ಟು ನಡೆದಾಡಲು ಕಲಿಯಲಿ ಎಂಬುದಾಗಿ ನೋಡುತ್ತಿರುವ ಸಹಾಯ ಹಸ್ತ ಎಂದು ತಿಳಿಯಬೇಕಾಗುತ್ತದೆ. ಬದಲಾಗಿ ಮನುಷ್ಯ ಮಾಡುವ ಕೆಲಸಗಳಲ್ಲಿ ಪ್ರಾರಂಭದಲ್ಲೆ ಬರಿ ಹುಳುಕುಗಳನ್ನು ಎತ್ತಿಹಿಡಿಸುತ್ತ ಬೆಳೆಯುವ ಚಿಗುರನ್ನು ಚಿವುಟಿದರೆ ಅದು ಗಿಡವಾಗಿ ಮರವಾಗುವುದಾದರೂ ಎಂತು. ಒಂದು ಕೃತಿಯ ಬಾಲಿಶತನ, ಜೊಳ್ಳು, ಗಟ್ಟಿತನ-ಇವುಗಳೆಲ್ಲ ಅಂತಹ ಮುದಿ ಲೇಖಕರಿಗೆ ಗೊತ್ತಿರದ ಸಂಗತಿ ಅಲ್ಲವೇನಲ್ಲ. ಅವರ ಹಿತವಾದ ಮಾತುಗಳೆಂಬ ಹಸ್ತ ಬೆನ್ನ ಸ್ಪರ್ಶಿಸಿದಾಗಲೇ ಜೀವಕ್ಕೆ ಚೈತನ್ಯ ಸಿಗುವುದು. ಅದೊಂದು ಟಾನಿಕ್ಕು. ಸೌಜನ್ಯ.

ಇನ್ನು ಆತ್ಮರತಿ ಕ್ಯಾನ್ಸರ್ ರೋಗ ಎನ್ನುತ್ತಾರೆ. ನೀವೇ ಹೇಳಿ ಪ್ರಹ್ಲಾದ್..., ಮನುಷ್ಯ ಕಥೆ ಹೇಳಿಕೊಳ್ಳದಿದ್ದರೆ ಅರ್ಥವಾಗೋದಾದ್ರು ಹೆಂಗೆ? ಆಗಲೇ ಅಲ್ಲವೆ ಆತನ ಅಂತರಾಳಗಳು ಅರಿವಾಗೋದು. ಅವನ ಸ್ವಭಾವ ಎಂತಹುದು, ಅವ ಗೋಮುಖ ವ್ಯಾಘ್ರನೆ ಅಥವಾ ಹಸುವಿನಂತವನೆ, ಆತನಿಂದ ಕುಟುಂಬಕ್ಕೆ, ಊರಿಗೆ, ಸಮಾಜಕ್ಕೆ ದೊರೆತ ಕೊಡುಗೆಗಳೇನು? ಆತ ಒಂದೊಮ್ಮೆ ದುಷ್ಟನಾಗಿದ್ದನೆ, ಆಗಿದ್ದಲ್ಲಿ ಅವನನ್ನು ಪರಿವರ್ತಿಸಿ ಒಳ್ಳೆಯವನನ್ನಾಗಿ ಮಾಡಿದ ಪರಿ ಯಾವುದು? ಹೀಗೆ ಒಬ್ಬನಲ್ಲಿರುವ ಹಲವು ವ್ಯಕ್ತಿಗಳ ದರ್ಶನವಾಗುವುದು ಆತನ ಮೆಘಾ ಧಾರಾವಾಯಿ ಕೇಳಿದಾಗಲೇ ಅಲ್ಲವೇ?

ಒಂದು ಕನ್ನಡ ಚಲನಚಿತ್ರದಲ್ಲಿ ಶ್ರೇಷ್ಠ ನಟರಾದ ಉಮೇಶ್ ಅವರು ಒಂದು ಪಾತ್ರ ಮಾಡಿದ್ದಾರೆ. ಆ ಪಾತ್ರ ಚಿತ್ರದುದ್ದಕ್ಕೂ ಪೋಲೀಸ್ ಠಾಣೆಯಲ್ಲಿ ಅಪರಾಧಿ ಸ್ಥಾನದಲ್ಲಿರುವಂತದ್ದು. ಅವರು ಅವರ ಪ್ರತಿ ದೃಶ್ಯದಲ್ಲೂ ಯಾರೇ ತಮ್ಮೆದುರು ಬಂದರೂ 'ಅಯ್ಯಾ ನನ್ನ ಕಥೆ ಹೇಳ್ತೀನಿ, ಕೇಳ್ರಯ್ಯ' ಅಂತ ಅಂಗಲಾಚುತ್ತಾರೆ. ಸಿನಿಮಾದ ಕೊನೆಯವರೆಗೂ ಯಾರೂ ಅವರಿಗೆ ಕಿವಿ ಕೊಡುವುದಿಲ್ಲ. ಅಂತಹ ಪಾತ್ರ ಎಷ್ಟು ಮನೋಜ್ಞವಾಗಿ ಅರ್ಥಗರ್ಭಿತವಾಗಿದೆ ಎಂದರೆ : ಇಂದಿನ ವೇಗದ ಯುಗದಲ್ಲಿ ಮನುಷ್ಯ ತನ್ನ ಸುತ್ತಲಿನ ಸಮಾಜದ ನೊಂದ ಮನಸುಗಳ ಆಕ್ರಂದನವನು ಕೇಳಲಾರದಷ್ಟು ಕಿವುಡನಾಗಿದ್ದಾನೆ. ಅಂದರೆ ಅಷ್ಟೊಂದು ಬಿಜಿಯಾಗಿದ್ದಾನೆ. ತನ್ನ ಬದುಕ ರೂಪಿಸಿಕೊಳ್ಳಲು ಮಾತ್ರ ಪ್ರತಿ ಕ್ಷಣ ಹೆಣಗುತ್ತಿದ್ದಾನೆ. ಇದು ಪರಿಸ್ಥಿತಿಯ ಕೈಗೊಂಬೆಯ ಸಹಜ ಸ್ಥಿತಿಯಾದರೂ ಅಕ್ಷರ ಪ್ರಪಂಚದ ಬದುಕು ಅನಾದಿಕಾಲದಿಂದಲೂ (ರೂಪ ವಿಕಸನವಾಗುತ್ತ) ಸಾಗಿ ಬಂದುದು ಕಥೆ ಹೇಳುವ. ಕೇಳುವ ಕುತೂಹಲದಿಂದಲೇ ಅಲ್ಲವೇ? ಆದ್ದರಿಂದ ಒಂದು ಪತ್ರಿಕೆ ಒಡೆಯ ತನ್ನನ್ನು ತಾನು ತೆರೆದುಕೊಳ್ಳಲೇ ಬೇಕಾಗುತ್ತದೆ. ಒಂದು ವೇಳೆ ಲೇಖಕರು ತನ್ನ ಆತ್ಮಕಥೆ ಹೇಳಿಕೊಳ್ಳದಿದ್ದರೂ ಸಹ ಪ್ರತಿ ಬರಹಗಾರನು ತನ್ನ ಬರಹದಿಂದ ತನ್ನನ್ನು ತೆರೆದುಕೊಂಡಿರುತ್ತಾನೆ. ಅಂದರೆ ಇಲ್ಲಿ ಆತ್ಮಕಥೆ ಹೇಳುವ ರೀತಿ ಎರಡು ಬಗೆಯಲ್ಲಿ ಇರುತ್ತವೆ. ಒಂದು ಕನ್ನಡಿಯಾದರೆ ಮತ್ತೊಂದು ಚಂದಿರನನ್ನು ಕನ್ನಡಿ ಮಾಡಿ ಅದರಲ್ಲಿ ತನ್ನನ್ನು ತೋರಿಸಿಕೊಳ್ಳುವುದಾಗಿರುತ್ತವೆ.

ಅವಕ್ಕೆ ರಪಿಬೆಳಗೆರೆಯುವರು ಬರೆಯುತ್ತಾರೆ.... 'ಮನುಷ್ಯ ಪತ್ರಲಾವಂತೆಲ್ಲಾ ಮಾನವನಾಗುತ್ತಾನೆ' ಎಂದು. ಆದ್ದರಿಂದ ಕೇಳುವ ತಾಳ್ಮೆ ನಮ್ಮಲ್ಲಿರಬೇಕು. ಮುಖ್ಯವಾಗಿ ಕಥೆ ಹೇಳಿಕೊಳ್ಳುವವ ಎಲ್ಲಿಯತನಕ ಹೇಳಿಕೊಂಡಾನು? ತನ್ನ ಪಯಣದ ಎಲ್ಲಾ ದೃಶ್ಯಗಳನ್ನು ಬಿಚ್ಚಿಡುತ್ತಾನೆ. ಬರೆಯಲು ಕುಳಿತ ಗಳಿಗೆಯವರೆಗಿನ ತನ್ನಲ್ಲಿ ನೋವು, ದುಃಖ, ಹತಾಶೆಗಳನ್ನೆಲ್ಲ ಹಂಚಿಕೊಳ್ಳುತ್ತ.... ಒಂದು ಹಂತದಲ್ಲಿ ತನಗೆ ಬೇಸರವಾಗಿ ಪೆನ್ನು ಮುಚ್ಚಿಡುತ್ತಾನೆ. ಆಗಲೇ ನೋಡಿ ಅಡುಗೆ ಮನೆಯಿಂದ ಗಮಗಮ ಹೊರಬರುವುದು. ಆ ಹೊತ್ತಿಗೆ ಬರಹಗಾರನ ಅಕ್ಷರ ಪ್ರೀತಿ, ಭಾವ, ಲಯ, ಸ್ಥಿತಿ, ಕಾಲ ಇವೆಲ್ಲ ಒಂದು ಹದಕ್ಕೆ ಬಂದು ಅವನ ಬರಹ ಪಕ್ವತೆ ಪಡೆದುಕೊಂಡಿರುತ್ತದೆ. ಇದು ಅವನ ಹೊಸ ಅವತಾರ. ಆಗಲೇ ಸಾಹಿತ್ಯ ಪ್ರಿಯರು ಅವನ ಅಚ್ಚುಕಟ್ಟಾದ ಸಾಹಿತ್ಯ ಸವಿಯಲು ಸಾಧ್ಯ.

ಇಲ್ಲಿ ಗಮನಿಸಬೇಕಾದ ಹಾಗೂ ಇರಬೇಕಾದ ಪ್ರಮುಖ ಅಂಶವೆಂದರೆ ಲೇಖಕನ ಪ್ರಾಮಾಣಿಕತೆ, ಸತ್ಯ, ನಿಷ್ಠೆ, ಮಾನವತೆ ಇದಿಲ್ಲದೆ ಆತ ಮೋಸ, ಕಪಟ, ವಂಚನೆಗಳ ಸುಳಿಯಲ್ಲಿದ್ದರೆ ಪತ್ರಿದಾರ ಓದುಗ ತೀರ್ಮಾನಿಸಿ ಬಿಡುತ್ತಾನೆ. ಇದು ಜೊಳ್ಳು ಎಂದು. ಉಸ್ ಎಂದು ಉರುವುತ್ತಾನೆ. ಹಾಗಾಗಿ ಇಲ್ಲಿ ಪ್ರತಿಯೊಂದು ಪ್ರದರ್ಶಿಸಲೇಬೇಕು. ಆಗಲೇ ವ್ಯಾಪಾರ ಕುದುರುವುದು.

ಪ್ರಕಾಶ್, ಓದುಗನಿಗಿಂತ ವಿಮರ್ಶಕನಿಲ್ಲ. ಶ್ರೇಷ್ಠವಿಮರ್ಶಕನು ಒಬ್ಬ ಓದುಗನೆ. ಮುದಿ ಲೇಖಕರು ಸಹಾಯ ಹಸ್ತ ನೀಡುವ ಒಲವು ತೋರಿದರೆ ಹಲ ಬಿಸಿರಕ್ತದ ಯುವಕರು ಕಂಪ್ಯೂಟರ್ ಇದ್ದ ಹಾಗೆ ಅವರಿಗೆ ತಾಳ್ಮೆ, ಸಹನೆ, ಮೃದುತ್ವ ಇಲ್ಲ. ಸತ್ಯವೆಂಬ ಅಂತಜ್ವಾಲೆ ಮುದಿ ಲೇಖಕರು ಬಲ್ಲವರಾಗಿರುತ್ತಾರೆ. ಆದರೆ ಸುಮ್ಮನಿರುತ್ತಾರೆ. ಆದರೆ ಈ ಕಿರಿ ಲೇಖಕರು ಆ ಅಂತಜ್ವಾಲೆಯನ್ನು ಕೊಳವೆಯಿಂದ ಊದಿ ಬೆಂಕಿ ಉರಿಸಿ ಬಿಡುತ್ತಾರೆ. ಇದು ಪ್ರಕೃತಿ ಸಹಜ ಗುಣ. ಆ ಬೆಂಕಿಗೆ ನಿಮ್ಮಂತ ಅಂಬೆಗಾಲು ಕಂದಗಳು ಭಯ ಪಡಬೇಕಾದ ಪ್ರಮೇಯವೇನಿಲ್ಲ. ಹಾಗಂತ ಯುವಕರನ್ನು ನಿರ್ಲಕ್ಷಿಸಬಾರದು. ಒಂದಿಷ್ಟು ಗಟ್ಟಿ ಸಾಹಿತ್ಯ ಶ್ರಮ, ಪುಟಗಳ ವೃದ್ಧಿ ಮುಂತಾದ ಕಾರ್ಯಕ್ರಮಗಳನ್ನು ಬಿರುಸಾಗಿ ತರಬೇಕಾಗುತ್ತದೆ ಅಷ್ಟೆ.

ಪ್ರಹ್ಲಾದ್ ಅವರ ಪತ್ರವೂ ಒಂದು ಕೊಳವೆ ಇದ್ದಂತೆ. ಅವರೇನೋ ಊದಿದ್ದಾರೆ. ಇನ್ನು ಹಂಡೆಯ ನೀರು ಕಾಯಿಸುವುದು ನಿಮ್ಮ ಕೆಲಸ. ನೀರು ಕಾದ ಮೇಲೆ ನಮಗೆಲ್ಲ ಹರಳೆಣ್ಣೆ, ಸೀಗೆಪುಡಿ ಸ್ನಾನ.

ಕೊನೆಯದಾಗಿ ಪ್ರಹ್ಲಾದ್ ಬಳಸಿದ ಮುದಿ ಲೇಖಕರು ಪದವನ್ನು ನಾನು ಪುನಃ ಉಪಯೋಗಿಸಿದ್ದಕ್ಕೆ ಕ್ಷಮೆ ಕೋರುತ್ತ.....



–ಜೆ. ಎನ್. ಕೃಷ್ಣಶರ್ಮ
ಜಾವಗಲ್

# ಬುದ್ಧ

ಬುದ್ಧ, ಬುದ್ಧ–
ಜಗವೆಲ್ಲ ಮಲಗಿರಲು ಇವನೊಬ್ಬನೆದ್ದ
ಮಡದಿ–ಮಗು–ಮನೆ–ಮಾರು ರಾಜ್ಯ–ಗೀಜ್ಯ
ಹೊತ್ತಿರುವ ಉರಿಯಲ್ಲಿ ಆಯಿತಾಜ್ಯ
ಹಿಂದೆ ಬಿದ್ದವು ಎಲ್ಲೊ ಕುದುರೆ ಕಾಲಾಳು
ಬಿಚ್ಚಿ ಉದುರಿತು ಎಲ್ಲೊ ಮನದ ಬಾಳು
ಹೊರಟ ಹೊರಟೇ ಹೊರಟ, ಹೊರಟನೆತ್ತೋ!
ಸಾಹಸಿಯ ಗೊತ್ತುಗುರಿ ಅವಗು ಗೊತ್ತೋ!

ಕಾಮ–ಕ್ರೋಧವ ದಾಟಿ, ಮದ–ಮತ್ಸರವ ತುಳಿದು
ಮೋಹ ಲೋಭವ ಮೆಟ್ಟಿ ಅಡಿ ಕಿತ್ತಿ ಇಟ್ಟ
ಇದೊ ತಗ್ಗು, ಅದೊ ಗುಡ್ಡ, ಅಗೊ ಮಲೆಯ ಬೆಟ್ಟ
ನೆಲ ತೆಳಗೆ ಬಿಟ್ಟ!

ಏರಿದೇರಿದನೇರಿ ಗಾಳಿಗುದುರೆ ಸವಾರಿ
ಚಂದ್ರಕಿರಣವ ಮೀರಿ ಸೂರ್ಯ ಸೇರಿ
ಬೆಳಕನ್ನೆ ಹಿಂದೊಗೆದು ತಮದ ಬಸಿರನೆ ಬಗೆದು
ಅಸ್ಪರ್ಶ ಅವಕಾಶದಲಿ ಇದ್ದ
ಬುದ್ಧ–ಬುದ್ಧ–ಬುದ್ಧ
ಶಬ್ದ–ನಾದ ಧ್ವನಿಯ ಸದ್ದ ಮೀರಿದ್ದ
ಇಲ್ಲ ಎಂಬುವ ಕೊನೆಗೆ ಆತ್ಮಶುದ್ಧ
ಇದ್ದರೆ ನಿಲದಿದ್ದರೇನೆನಲು ಗೆದ್ದ!

ಅಲ್ಲಿಂದ ಇಲ್ಲಿವರೆಗೆ ಹೊರಳಿ ನೋಡಿ
ಇದ್ದುದಿದ್ದಂತಿತ್ತು ಜನನ–ಮರಣದ ಜೋಡಿ
ಗೆದ್ದುದೇನೆಂದೆನುತ ಮರಳಿ ಜಿಗಿದ
ಭೂತಜಾತದ ಎಳೆಯ ಸೀಳಿ ಸಿಗದ
ಅದೆ ತನ್ನ ಮನೆಯೆಂದು ಸಿದ್ಧ ಬಗೆದ!

ಬುದ್ಧನೆಂಬುವ ಒಬ್ಬ ಎಂದೊ ಇದ್ದ
ಎನುವಂತೆ ಇಂದಿಗೂ ಇಲ್ಲೆ ಇಲ್ಲ
ಬುದ್ಧ ಹುಟ್ಟಿದ ಮೇಲೆ ಹಳೆ ಜಗವು ಸತ್ತು
ಇದ್ದು ಇಲ್ಲದ ಹಾಗೆ ಹಾಗೇ ಇತ್ತು
ಬುದ್ಧ ಸತ್ತನು ಎಂದು ಯಾರೆಂದರೂ
ಬುದ್ಧನ ಜಯಂತಿಗಿದೆ ಜಯವೆಂದಿಗೂ
ಬುದ್ಧನ ಸಮಾಧಿಯದು ಮಾನವನ ಹೃದಯ
ಅದುವೆ ಕಾಯುತ್ತಲಿದೆ ಕಲ್ಕಿ ಉದಯ!

–ಬೇಂದ್ರೆ

ನೋವು ದುಃಖ ಸಂಕಟ ಆಕ್ರೋಶಮಯ ಬದುಕಿನ
ನೈಜ ಚಿತ್ರಣವೇ ಸಂಪಾದಕನ ಈ ಆತ್ಮಕಥೆ




ಭಾಗ-೬

## 'ಬುದ್ಧ' ನನ್ನೊಳಗೆ ಏನೆಲ್ಲ ಮಾಡಿಬಿಟ್ಟ!

ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಡಾ॥ ಶಿವರಾಮ ಕಾರಂತರ ಸಿರಿಗನ್ನಡ ಅರ್ಥಕೋಶದಲ್ಲಿ 'ಬುದ್ಧ' ಎಂದರೆ ತಿಳಿದ, ಬಲ್ಲ, ಜ್ಞಾನ ಗಳಿಸಿದ; ಬೌದ್ಧ; ಶಾಕ್ಯ ವಂಶದ ಒಬ್ಬ ರಾಜಕುಮಾರ. ಈತನ ಮೊದಲ ಹೆಸರು ಸಿದ್ಧಾರ್ಥ. ಇವನಿಗೆ ಯಶೋಧರೆಯು ಹೆಂಡತಿ, ರಾಹುಲ ಮಗ. ಈತನು ಜಗತ್ತಿನ ಸಾವು-ನೋವುಗಳಿಗಾಗಿ ಮರುಗಿ ಅವುಗಳ ತೊಡಕು ಬಿಡಿಸಲು ತಪಸ್ಸು ಮಾಡಿ ಜ್ಞಾನ ಗಳಿಸಿದನು. ಅಂದಿನಿಂದ ಬುದ್ಧನೆನಿಸಿಕೊಂಡನು- ಇಷ್ಟು ಮಾಹಿತಿಗಳು ದೊರೆಯುತ್ತವೆ.

ಇಂತಹ ಗೌತಮ ಬುದ್ಧ ನನ್ನೊಳಗೆ ಪ್ರೌಢಶಾಲಾ ದಿನಗಳಲ್ಲೇ ಆವರಿಸಿದ್ದ. ಈಗಲೂ ಅವನ ಮಾನವೀಯ ಪ್ರೀತಿ, ದಯೆ, ಕರುಣೆ, ಶಾಂತಿ ಸಂದೇಶ ನನಗೆ ಇಷ್ಟ. ಬುದ್ಧ ಹೆಂಡತಿ-ಮಕ್ಕಳು, ರಾಜ್ಯ ಎಲ್ಲವನ್ನು ಪರಿತ್ಯಜಿಸಿ ಬೋಧಿ ವೃಕ್ಷದ ಕೆಳಗೆ ಕುಳಿತು ಜ್ಞಾನೋದಯ ಪಡೆದಿದ್ದು, ಹುಟ್ಟಿದ್ದು, ದೇಹ ತ್ಯಜಿಸಿದ್ದು-ಎಲ್ಲವೂ ಮೇ ೧೬ರಂದೆ. ಇದನ್ನು ನಾವು ಪ್ರತಿ ವರ್ಷ ಬುದ್ಧ ಪೌರ್ಣಮಿ ಎಂದು ಆಚರಿಸುತ್ತೇವೆ.

ಬುದ್ಧನಂತೆ ನನಗೂ ಈ ಹುಟ್ಟು-ಸಾವು ನೋವುಗಳು ಕಾಡಿಸುತ್ತಿತ್ತು. ನಾನಾಗಲೇ ಇಬ್ಬರು ಅಣ್ಣಂದಿರ ಸಾವನ್ನು ಪ್ರತ್ಯಕ್ಷವಾಗಿ ಕಂಡಿದ್ದೆ. ನಾನೂ ಬುದ್ಧನಂತೆ ತಪಸ್ಸು ಮಾಡಿ ಜ್ಞಾನೋದಯ ಪಡೆಯಬೇಕೆಂದು ನಿರ್ಧರಿಸಿದೆ. ಅದಕ್ಕಾಗಿ ಸ್ಥಳದ ಹುಡುಕಾಟ ಶುರುವಾಯಿತು. ಬುದ್ಧ ಯಾವ ದೇವರ ಕುರಿತು ತಪಸ್ಸು ಮಾಡಿದನೊ ಗೊತ್ತಿಲ್ಲ. ಆದರೆ ನಾನು ಮಾತ್ರ ಶಿವನ ಆರಾಧಕನಾಗಿದ್ದೆ. ಮಾಂಸ-ಮದ್ಯಯನ್ನು ತಿನ್ನುವುದನ್ನು ಬಿಟ್ಟಿದ್ದೆ. ಶಾಲೆಗಂತೂ ಹಣೆ ಮೇಲೆ ವಿಭೂತಿ ಪಟ್ಟೆ ಇಲ್ಲದೆ ಹೋಗುತ್ತಿರಲಿಲ್ಲ. ಮನದಲ್ಲೆಲ್ಲ ಓಂ ನಮಃ ಶಿವಾಯಃ ಮಂತ್ರವೇ ತುಂಬಿತ್ತು. ನನ್ನೂರು ತುಮಕೂರು ಜಿಲ್ಲೆಯ ಕುಣಿಗಲ್‌ನಿಂದ ಏಳು ಕಿಲೋಮೀಟರ್ ದೂರದಲ್ಲಿದೆ. ಅದಕ್ಕೊಂದು ಕಥೆಯೂ ಇದೆ.

ಚಾಮರಾಜನಗರ ಜಿಲ್ಲೆಯ ಹರವಹಳ್ಳಿ ಗ್ರಾಮದಲ್ಲಿ ೧೫ನೇ ಶತಮಾನದಲ್ಲಿ ಸಿದ್ಧಲಿಂಗೇಶ್ವರ ಸ್ವಾಮಿಯವರು ಈಶ್ವರನ ಅವತಾರವಾದ ಒಂದು ಶಿಶುವಾಗಿ ಕಾಣಿಸಿಕೊಂಡರು. ಅವರು ಎಂಟನೇ ವರ್ಷದಲ್ಲಿ ಗೋಸಲ ಮಠದ ಚನ್ನಬಸವ ಶಿವಯೋಗಿಗಳಿಂದ ವಿಧಿವತ್ತಾಗಿ ಶಿವದೀಕ್ಷೆಯನ್ನು ಪಡೆದು ಮುಂದೆ ಅವರು ೭೦೧ ವಿರಕ್ತರೊಂದಿಗೆ ಅನೇಕ ಶಿವಾಲಯ ಪರ್ಯಂತ ಸಂಚರಿಸಿ ಕುಣಿಗಲ್ ತಾಲ್ಲೂಕಿನ ಕಗ್ಗೆರೆ ಗ್ರಾಮಕ್ಕೆ ಆಗಮಿಸುವರು. ಕಗ್ಗೆರೆಯ ದಕ್ಷಿಣ ದಿಕ್ಕಿನಲ್ಲಿ ನಾಗಿನಿ ನದಿಯಲ್ಲಿ ಯಥಾ ಪ್ರಕಾರ ಸ್ನಾನ ಮಾಡಿ ಅಲ್ಲಿಯ ತೋಟದಲ್ಲಿ

ಶಿವಪೂಜಾ ಮಗ್ನರಾದರು. ಒಂದು ದಿನ ಕಗ್ಗೆರೆಯ ನಿವಾಸಿಯಾದ ನಂಬಣ್ಣನೆಂಬ ಸದ್ಭಕ್ತನು ಸ್ವಾಮಿಯವರಿಗೆ ಭಿನ್ನಹದ ವೀಳ್ಯವನ್ನು ನೀಡಿ ಮನೆಗೆ ಬರುವಷ್ಟರಲ್ಲಿ ಕೆಂಚರೊಡ್ಡರೆಂಬ ಬೇಡರು ಕಗ್ಗೆರೆ ಗ್ರಾಮದ ಮೇಲೆ ದಾಳಿ ಮಾಡಿದ ಕಾರಣ ನಂಬಣ್ಣನವರು ಸ್ವಾಮಿಯವರಿಗೆ ಭಿನ್ನಹ ಮಾಡಿಸದೆ ಊರಜನರ ಜೊತೆ ಬೇರೆ ಊರಿಗೆ ಹೋಗಬೇಕಾಯಿತು. ಆ ಸಮಯದಲ್ಲಿ ಕಗ್ಗೆರೆಯಲ್ಲಿಯೇ ಸಿದ್ಧಲಿಂಗೇಶ್ವರಸ್ವಾಮಿಯವರು ಕರಸ್ಥಳ ಲಿಂಗದೊಳಗೆ ಧ್ಯಾನಾಸಕ್ತರಾಗಿ ಶಿವಯೋಗದಲಿ ಮೈ ಮರೆತರು. ಹೀಗೆ ವರ್ಷಗಳು ಕಳೆದು ನಂತರ ಸ್ವಾಮಿಯವರ ಸುತ್ತ ಹುತ್ತ ಬೆಳೆದುಕೊಂಡಿತು. ಮುಂದೆ ಒಂದು ದಿನ ಅವರ ಮನೆಯ ಗೋವು ಹುತ್ತದ ಮೇಲೆ ಹಾಲು ಕರೆಯುವುದನ್ನು ನೋಡಿ ಆಶ್ಚರ್ಯಚಕಿತನಾಗಿ ಆ ಹುತ್ತದಲ್ಲಿ ಸಿದ್ಧಲಿಂಗಸ್ವಾಮಿಯವರು ಜ್ಞಾನಾಸಕ್ತರಾಗಿರುವುದನ್ನು ಜ್ಞಾನಿಗಳಿಂದ ತಿಳಿದರು. ಅವರಿಗೆ ಬೇಡರ ದಾಳಿಯ ಪರಿಣಾಮವಾಗಿ ಸ್ವಾಮಿಯವರಿಗೆ ಭಿನ್ನಹ ಮಾಡಿಸದೆ ಇರುವುದು ಅರಿವಾಯಿತು. ಆಗ ನಂಬಣ್ಣ ಸಕಲ ಪರಿವಾರ ಹಾಗೂ ಮಂಗಳವಾದ್ಯ ಸಮೇತವಾಗಿ ತೋಟಕ್ಕೆ ಫಾಲ್ಗುಣ ಶುದ್ಧ ಸಪ್ತಮಿಯಂದು ಮಧ್ಯಾಹ್ನ ೧೨.೦೦ಗಂಟೆಗೆ ಬಂದು ಹುತ್ತದ ಮೇಲೆ ೭೦೧ ಕೊಡ ಹಾಲು ಸುರಿದು ಅದನ್ನು ಕರಗಿಸಿ ಸಿದ್ಧಲಿಂಗಸ್ವಾಮಿಯವರಿಗೆ ನಮಸ್ಕರಿಸಿದರು.

ಸಿದ್ಧಲಿಂಗಸ್ವಾಮಿ ಆಜ್ಞಾನುಸಾರ ನಂಬಣ್ಣನವರು ಸ್ವಾಮೀಜಿಯವರಿಗೆ ದಾಳಿಯಾಗುವ ಮುಂಚೆ ಮಾಡಿದ ಅಡಿಗೆಯನ್ನು ತರಿಸಿ ನೋಡಿದಾಗ ಆಗ ತಾನೆ ತಯಾರಿಸಿದ ಅಡುಗೆ ಇದ್ದ ಹಾಗೆ ಇತ್ತು. ಅದೇ ಪ್ರಸಾದವನ್ನು ಸ್ವಾಮಿಯವರು ಭಕ್ತರ ಸಮೇತ ಸ್ವೀಕರಿಸಿದರು. ಅಂದಿನಿಂದ ಕಗ್ಗೆರೆ ಶ್ರೀ ತೋಂಟದ ಸಿದ್ಧಲಿಂಗೇಶ್ವರ ಸ್ವಾಮಿ ದೇವಸ್ಥಾನದಲ್ಲಿ ಪ್ರತಿ ವರ್ಷ ಮಹಾರಥೋತ್ಸವ ನಡೆಯುತ್ತದೆ. ಎಡೆಯೂರು ಸಿದ್ಧಲಿಂಗೇಶ್ವರರ ಮೂಲಸ್ಥಳ ಕಗ್ಗೆರೆ. ಕಗ್ಗೆರೆ ತಪೋಕ್ಷೇತ್ರ. ಯಾತ್ರಾಸ್ಥಳ. ಎಡೆಯೂರು ಸಿದ್ಧಲಿಂಗೇಶ್ವರ ಎಂಬ ಹೆಸರಿನಲ್ಲಿ ಸಿನಿಮಾ ಸಹ ನಿರ್ಮಾಣಗೊಂಡಿದೆ.

ತಪಸ್ಸಿಗೆ ಇದಕ್ಕಿನ್ನ ಸ್ಥಳ ಬೇಕೆ? ನನ್ನೂರೇ ಯೋಗ್ಯ ಸ್ಥಳ ಎಂದು ತೀರ್ಮಾನಿಸಿದೆ. ಮನೆಯಲ್ಲಿ ಯಾರೂ ಇಲ್ಲದಾಗ ಕಚ್ಚೆ ಹಾಕಿಕೊಂಡು, ಪದ್ಮಾಸನದಲ್ಲಿ ಕುಳಿತು ಗಂಟೆಗಟ್ಟಲೆ ಧ್ಯಾನದಲ್ಲಿ ಮಗ್ನನಾಗುತ್ತಿದ್ದೆ. ಆಗ ಕಾಲೆಲ್ಲ ಜಿವ್ವಿಡಿದು, ರಕ್ತದ ಚಲನೆಯಲ್ಲ ನಿಂತು ಹೆಪ್ಪುಗಟ್ಟಿ ಏನೋ ಒಂದು ರೀತಿ ಆಗುತ್ತಿತ್ತು. ಉಸಿರು ಮಾತ್ರ ಓಂ ನಮಃ ಶಿವಾಯಃದಲ್ಲಿ ಬೆರೆತುಹೋಗಿತ್ತು. ಯಾರಾದರೂ ಬಂದುಬಿಟ್ಟರೆ ತಟ್ಟನೆ ಎದ್ದು ಬಿಡುತ್ತಿದ್ದೆ. ಛೀ! ಮನೆಯಲ್ಲಿ ಅಸಾಧ್ಯ ಎಂದುಕೊಂಡೆ. ಸೀಗೆಮೆಳೆ, ದಟ್ಟವಾದ ಸೊಪ್ಪುಸೆದೆ ಇರುವ ಜಾಗ ಹುಡುಕಾಡಿದೆ. ಇಲ್ಲಿಲ್ಲ ಊರಿನವರು ನೋಡಿಬಿಟ್ಟರೆ–ಇದೂ ಸಾಧ್ಯವಿಲ್ಲ. ಈ ಊರೇ ಬಿಟ್ಟು ಬಿಡಬೇಕು ಎನ್ನಿಸಿತು. ಆಗ ಹೇಗೋ ಹಣ ಹೊಂದಿಸಿಕೊಂಡೆ. ಮಲೆನಾಡು ಪ್ರದೇಶವೆನಿಸಿದ ಧರ್ಮಸ್ಥಳಕ್ಕೆ ಹೋದೆ. ಅಲ್ಲಿ ಬಾಹುಬಲಿ ಮುಂದೆ ನಿಂತೆ. ಸುತ್ತಲೂ ಅರಣ್ಯ ನೋಡಿದೆ. ಅಬ್ಬಾ! ಈ ಅರಣ್ಯದಲ್ಲಿ ಹೇಗೆ ಹೋಗೋದು? ಹುಲಿ, ಸಿಂಹ, ಕರಡಿ, ಚಿರತೆ, ಆನೆ, ಹಾವು ಇತ್ಯಾದಿ ಕಾಡು ಪ್ರಾಣಿಗಳು ನನ್ನ ಬಿಡುತ್ತವೆ? ಛೀ! ಅಪ್ಪ–ಅಮ್ಮ, ಬಂಧು–ಬಳಗ, ಸ್ನೇಹಿತರು ಎಲ್ಲರನ್ನೂ ಬಿಟ್ಟು ಬಾಳುವುದು ಒಂದು ಬಾಳೆ? ಇದಕ್ಕಿಂತ ಪರಲೋಕ ಮೇಲೆ? ನೋಡಿಲ್ಲ, ಕಂಡಿಲ್ಲ. ಇಲ್ಲಿ ಸಲ್ಲುವವರು ಅಲ್ಲಿಯೂ ಸಲ್ಲುವರು ಎನ್ನುತ್ತಾರೆ. ಮೊದಲು ಇಲ್ಲಿ ಸಲ್ಲೋಣ, ಆನಂತರ ಸತ್ತ ಮೇಲೆ ಬೇಕಿದ್ದರೆ ಅಲ್ಲಿಗೆ ಹೋಗೋಣ ಎಂಬ 'ಜ್ಞಾನೋದಯ'ವನ್ನು ಬಾಹುಬಲಿ ಸನ್ನಿಧಿಯಲ್ಲಿ ಮಾಡಿಕೊಂಡು ಸೀದ ಊರ ಹಾದಿ ಹಿಡಿದೆ.

## ಕೃತಜ್ಞತೆಗಳು

Date 17-5-2003

Pay ಸೇಲ್ಫ್ ... or Bearer

ರುಪಯೆ Rupees ಎರಡು ನೂರ ಐವತ್ತು ರೂಪಾಯಿ ಮಾತ್ರ ... ₹ 250/-

स्टेट बैंक ऑफ मैसूर 373...

STATE BANK OF MYSORE

NAGARABHAVI BRANCH, BANGALORE - 560 056

SBM-10/99

⑈285026⑈ 560006052⑆ 10

ಆಜೀವ ಚಂದಾಕ್ಕಾಗಿ ಖ್ಯಾತ ವಿಮರ್ಶಕ ಹಾಗೂ ವಿದ್ವಾಂಸರಾದ **ಪ್ರೊ. ಕಿ.ರಂ.ನಾಗರಾಜ್** ಅವರು ಪ್ರೀತಿಯಿಂದ ನೀಡಿರುವ ಮೊದಲ ಕಂತಿನ ಸೆಲ್ಫ್ ಚೆಕ್

### ಆಜೀವ/ವಾರ್ಷಿಕ ಚಂದಾ ನೀಡಿರುವ ಗಣ್ಯರು

ಡಾ|| ಸಿದ್ಧಲಿಂಗಯ್ಯ

ಶಾಂತಾನಂದ ಸ್ವಾಮೀಜಿ

ಪ್ರೊ. ಕಿ.ರಂ. ನಾಗರಾಜ್

ಟಿ. ಸುನಂದಮ್ಮ

ಚಂದ್ರಶೇಖರ ಆಲೂರು

ಡಾ|| ಎಸ್.ವಿ. ಪ್ರಭಾವತಿ

ನೇಮಿಚಂದ್ರ

ಗುಡಿಹಳ್ಳಿ ನಾಗರಾಜ್

ಜಿ. ಪಿ. ಬಸವರಾಜು

ಪ್ರೊ. ಎ.ಎಸ್. ಜಯರಾಂ

ಪ್ರೊ. ಎಚ್ಚೆಸ್ಕೆ

ಡಾ|| ದೇ. ಜವರೇಗೌಡ

ಡಾ|| ಸಿ.ಪಿ.ಕೃಷ್ಣಕುಮಾರ್

ಸಿ.ಎನ್.ಮುಕ್ತಾ

ಡಿ.ವಿ.ಕೆ. ಮೂರ್ತಿ

ಡಾ|| ರಾಮೇಗೌಡ

ಪ್ರೊ. ಕೆ.ಎಸ್. ಭಗವಾನ್

ಡಾ|| ಹಿ. ಶಿ. ರಾಮಚಂದ್ರಗೌಡ

ಡಾ|| ಲತಾ ರಾಜಶೇಖರ್

ಬಿ. ನಾಗೇಂದ್ರಪ್ಪ

'ಅನಂತ'ಕ್ಕಾಗಿ ಪ್ರೀತಿ ಪೂರ್ವಕವಾಗಿ ಇವರು ಆಜೀವ / ವಾರ್ಷಿಕ ಚಂದಾವನ್ನು ನೀಡಿದ್ದು ಇಂತಹ ಬೆಂಬಲ ನಿರಂತರವಾಗಿ ಹರಿದು ಬರುತ್ತಿದೆ. ಪತ್ರಿಕೆ ಈಗಾಗಲೇ ಕವಿಗಳು, ಕಲಾವಿದರು, ವಿಮರ್ಶಕರು, ವಿದ್ವಾಂಸರು, ತೀವ್ರ ಸಾಹಿತ್ಯಾಸಕ್ತರ ಗಮನ ಸೆಳೆದಿರುವುದು ನಮಗೆ ಸಂತಸ ತಂದಿದೆ. ಜವಾಬ್ದಾರಿ ಹೆಚ್ಚಿಸಿದೆ. ಇವರೆಲ್ಲರಿಗೂ ನಮ್ಮ ಕೃತಜ್ಞತೆಗಳು. –ಸಂ.

## ನಮ್ಮ ಜಿಲ್ಲಾವಾರು ಗೌರವ ಪ್ರತಿನಿಧಿಗಳು

**ಬೆಳಗಾವಿ**
ಪ್ರೊ.ವೆಂಕಟೇಶ ಹುಣಶೀಕಟ್ಟಿ
ಖುರ್ಷಿದ್ ಆಲಂ ಮೋಮಿನ
ಜಯಂತಿ ವಸಂತ ರೇವಡಿ
ವಿನಾಯಕ ಎಸ್. ಜವಳಿ
**ಉತ್ತರ ಕನ್ನಡ** -ಅಬ್ದುಲ್ ರೆಹಮಾನ್
**ಚಿಕ್ಕಮಗಳೂರು** -ಜಯಲಕ್ಷ್ಮಿ
**ಮೈಸೂರು**
ಗೋ.ಶಿ. ವಿಜಯಲಕ್ಷ್ಮಿ
ಗಿರಿಜಾರಾವ್
**ಚಾಮರಾಜನಗರ** -ಯ.ಮ.ಹೇಮಂತಕುಮಾರ್
**ತುಮಕೂರು**
ಸಿ.ನಾಗಲಕ್ಷ್ಮಿ
ವಿಜಯಮೂರ್ತಿ
**ಬಿಜಾಪುರ**
ಗೀತಾ ಎನ್. ಪಾಟೀಲ್
**ಬಾಗಲಕೋಟೆ**
ಸಂತೋಷ್ ಆರ್. ಪೂಜಾರ್
**ಶಿವಮೊಗ್ಗ**
ಎಂ. ಸುಶೀಲ

**ಹಾಸನ** -ಜೆ.ಎನ್.ಕೃಷ್ಣಶರ್ಮ
**ಗದಗ** -ನಾಗರಾಜ ಎಂ.ಹುಡೇದ
**ಬೆಂಗಳೂರು ನಗರ** -ಎಂ.ಉಮಾಶಂಕರ್
**ಬೆಂಗಳೂರು ಗ್ರಾಮಾಂತರ**
ಎಂ. ಪ್ರಕಾಶ್‌ಮೂರ್ತಿ
**ಗುಲ್ಬರ್ಗಾ** -ಶಶಿಕಲಾ ಎಸ್.ವೋದೆ
**ಕೋಲಾರ** -ಚನ್ನಕೃಷ್ಣ
**ದಾವಣಗೆರೆ**
ಸಂಧ್ಯಾ ಎಸ್.ಪಾಟೀಲ್
ಜಿ.ಪಿ. ಲಿಂಗೇಶಮೂರ್ತಿ
**ಧಾರವಾಡ**
ಎಸ್.ಎಚ್. ಲಂಬೂನವರ
ರಜಿಯಾ ಸಿ. ಮುಲ್ಲಾ
ಶರಣಕುಮಾರ ಹಂದ್ರಾಳ
**ಮಂಡ್ಯ**
ಎಸ್. ನಾರಾಯಣ
**ರಾಯಚೂರು**
ಅಮರೇಶ ಎಸ್. ಕಡೆಮನಿ

<u>ಚಂದಾ ವಿವರ</u>

| | | | |
|---|---|---|---|
| ಅಂಚೆ ವೆಚ್ಚ ಸೇರಿ | ವಾರ್ಷಿಕ ಚಂದಾ | : | ರೂ. ೧೦೦/- |
| | ಆಜೀವ ಚಂದಾ | : | ರೂ. ೧೦೦೦/- |

======== ಚಂದಾ, ಬರಹಗಳನ್ನು ಕಳುಹಿಸುವ ವಿಳಾಸ ========
**– ಕೆ.ಸಿ.ಪ್ರಕಾಶ, ಪ್ರಕಾಶಕರು**
**ಕಗ್ಗೆರೆ ಪ್ರಕಾಶನ, ಪಿ.ಬಿ.ನಂ. ೯೧೫೧, ಕೆಂಪೇಗೌಡನಗರ, ಮಾಗಡಿ ಮುಖ್ಯರಸ್ತೆ,**
**ವಿಶ್ವನೀಡಂ ಅಂಚೆ, ಬೆಂಗಳೂರು-೫೬೦ ೦೯೧. ಪಿ.ಪಿ. ನಂ. ೩೫೮೦೮೮**

■ ಪತ್ರಿಕೆಯನ್ನು ಹೊಸ ರೀತಿಯಲ್ಲಿ ರೂಪಿಸುತ್ತಿದ್ದೀರಿ. ಸಂತೋಷ. ಕುವೆಂಪು ಅವರ ಯಾರಿವನು?, ಟಿ.ಸುನಂದಮ್ಮನವರ ಸಂದರ್ಶನ, ಸುಜನಾ ಹೇಳಿಕೆ, ಹಾರೆ ಗುದ್ದಲಿ ಪಿಕಾಸಿ ಹಿಡಿದದ್ದು-ಇತ್ಯಾದಿ ಬರಹಗಳು ಅಪೂರ್ವವಾಗಿವೆ. –ಪ್ರೊ. ಎ. ಎಸ್. ಜಯರಾಂ

■ ಅನಂತ ಬಂದಿದೆ. ವಿಭಿನ್ನ ಪ್ರಯೋಗ. ನಿಮ್ಮ ಸಾಹಸ ಮೆಚ್ಚುವಂಥದ್ದು. ಎಲ್. ಬಸವರಾಜರ ಜೊತೆಗಿನ ಸಂದರ್ಶನ ಅದ್ಭುತವಾಗಿದೆ. ಈ ಮಧ್ಯೆ ನಿಮ್ಮ ಆತ್ಮಕಥೆಯ ಭಾಗ ಒಂದು ಸಂಸ್ಕೃತಿಯನ್ನು ಪರಿಚಯಿಸುತ್ತದೆ.

–ಡಾ|| ಸರಜೂ ಕಾಟ್ಕರ್

■ ಅನಂತ-೫ ಬಂತು. ಕುತೂಹಲದಿಂದ ಓದಿದೆ. ಅಂಗೈಯಲ್ಲಿ ಸಮುದ್ರವನ್ನು ಹಿಡಿಯುವ ದೊಡ್ಡ ಸಾಹಸಕ್ಕೆ ಇಳಿದಿದ್ದೀರಿ ಪುಟಗಳ ಮಿತಿಯಲ್ಲಿ-ಬಳ್ಳಿ ತನಗಿಂತಲೂ ಭಾರವಾದ ಹಣ್ಣನ್ನು ಎತ್ತಿಕೊಳ್ಳುವಂತೆ. ಸಾಹಿತ್ಯದ ವಿವಿಧ ಮುಖಗಳನ್ನು ಹಿರಿ-ಕಿರಿಯರಿಂದ ಪರಿಚಯಿಸಿದ್ದೀರಿ, ಅಭಿನಂದನೆಗಳು. –ಡಾ|| ನಾ. ಮೊಗಸಾಲೆ

■ ನೀವು ನಿಮ್ಮ ಆತ್ಮಕಥೆ ಚೆನ್ನಾಗಿ ಬರೆಯುತ್ತಿದ್ದೀರಿ. ನಿಮಗೆ ಒಳ್ಳೆ ಬರವಣಿಗೆ ಇದೆ. ನೀವು ಹೆಚ್ಚು ಬರೆಯಿರಿ. ನಿಮ್ಮ ಪ್ರತಿಭೆ ಬೆಳಕಿಗೆ ಬರಬೇಕು. ಅದು ಸಮಾಜಕ್ಕೂ ಉಪಯೋಗವಾಗಬೇಕು.

–ಡಾ|| ಸಿದ್ಧಲಿಂಗಯ್ಯ



## ಯುವ ಪ್ರತಿಭಾ ಪುರಸ್ಕಾರ

ಆತ್ಮೀಯ ಕಗ್ಗೆರೆ ಪ್ರಕಾಶ್ ಅವರೇ

ತಮ್ಮ ಸಂಪಾದಕತ್ವದಲ್ಲಿ ಪ್ರತಿ ತಿಂಗಳು ಪ್ರಕಟವಾಗುತ್ತಿರುವ 'ಅನಂತ' ಮಾಸ ಪತ್ರಿಕೆಯನ್ನು ನಾವು ಪರಾವಲೋಕಿಸಿದ್ದೇವೆ. ಅತ್ಯಂತ ಕಿರಿಯ ವಯಸ್ಸಿನಲ್ಲೇ ಕಷ್ಟನಷ್ಟಗಳು, ದುಃಖ ದುಗುಡಗಳ ಮಧ್ಯೆ ಕುಗ್ಗದೆ ಸಾಹಿತ್ಯಾಸಕ್ತ ಅರಳು ಪ್ರತಿಭೆಗಳಿ ಅನಂತ ಒಂದು ವೇದಿಕೆಯಾಗಿ ಅವಕಾಶ ಕಲ್ಪಿಸಿರುವುದು ಬಹಳ ಸಂತೋಷಕರ ವಿಷಯ

ಇಂದಿನ ದಿನಗಳಲ್ಲಿ ಸದಭಿರುಚಿಯ ಪತ್ರಿಕೆಗಳ ಸಂಖ್ಯೆ ಗಣನೀಯವಾ ಕಡಿಮೆಯಾಗುತ್ತಿದೆ. ಅನಂತ ಪತ್ರಿಕೆಯಂತ ಸದಭಿರುಚಿಯುಳ್ಳ ಪತ್ರಿಕೆಗಳ ಹಿಂದೆಂದಿಗಿಂತಲೂ ಇಂದು ಅತ್ಯಂತ ಅವಶ್ಯಕವಾಗಿವೆ.

ಸುಂಕದಕಟ್ಟೆಯಲ್ಲಿಯ ಕನ್ನಡ ರಾಜ್ಯೋತ್ಸವದಲ್ಲಿ ನೀವು ಪರಿಚಿತರಾದಿರಿ ನಿಮ್ಮ ವಿಶೇಷ ಸಾಹಿತ್ಯಾಸಕ್ತಿ ನನ್ನನ್ನು ಬೆರಗುಗೊಳಿಸಿತು. ಮುಂದೆ ಆಗಾ ಭೇಟಿಯಾದಾಗ ವಿವೇಕಾನಂದರ ರಾಷ್ಟ್ರಪ್ರೇಮ ಹಾಗೂ ವಿಚಾರಧಾರೆಯನ್ನು ಕುರಿತ ಬಹಳ ದೀರ್ಘ ಕಾಲದವರೆಗೆ ನಾವಿಬ್ಬರು ಚರ್ಚಿಸುತ್ತಿದ್ದುದು ನೆನಪಿನಲ್ಲಿ ಉಳಿದಿದೆ

ನಮ್ಮ ಆಶ್ರಮದ ವತಿಯಿಂದ ೨೦೦೩ನೇ ಸಾಲಿನ ವಿವೇಕಾನಂದ ಜಯಂತೋತ್ಸವದ ಸುಸಂದರ್ಭದಲ್ಲಿ 'ಯುವ ಪ್ರತಿಭಾ ಪುರಸ್ಕಾರ'ಕ್ಕೂ ತಾವು ಪಾತ್ರರಾಗಿದ್ದೀರಿ. ತಮ್ಮ ವಿಶೇಷ ಸಾಹಿತ್ಯಾಸಕ್ತಿಗೆ ಕನ್ನಡ ಜನತೆಯು ಹೃದಯ ಪೂರ್ವಕವಾಗಿ ಸೂಕ್ತ ರೀತಿಯಲ್ಲಿ ಸ್ಪಂದಿಸಲಿ ಎಂದು ಆಶಿಸೋಣ. ಅನಂತ ಮುಂದ ಈ ನಾಡಿನ ಸಾಹಿತ್ಯಾಸಕ್ತರ ಜೀವನಾಡಿಯಾಗಿ ಅನಂತವಾಗಿ ಬೆಳಗಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತ ನಮ್ಮ ಹೃದಯ ಪೂರ್ವಕ ಅನಂತ ಆಶೀರ್ವಾದಗಳೊಂದಿಗೆ......

ಇತಿ

ಭಗವತ್ಸೇವೆಯಲಿ ತಮ್ಮ ವ

–ಶಾಂತಾನಂದ ಸ್ವಾಮೀಜಿ

ರಾಮಕೃಷ್ಣ ಓಂಕಾರಾಶ್ರಮ

ಬೆಂಗಳೂರು